ಕಾಯಕವೇ ಕೈಲಾಸ



# ಸಿದ್ಧಗಂಗಾ



ಸಂಪುಟ : ೪೦ ಮಾರ್ಚ್ ೨೦೧೪ ಸಂಚಿಕೆ : ೩

ಆದರ್ಶ ಶಿಕ್ಷಕ

ಸರಳ ಸಜ್ಜನಿಕೆಯ ನುಡಿಗಾರುಡಿಗ

## ಪಂಡಿತ ಚೆನ್ನಪ್ಪ ಎರೇಸೀಮೆ




ಮುಖಪುಟ

*ಆದರ್ಶ ಶಿಕ್ಷಕ, ನುಡಿಗಾರುಡಿಗ*
*ಲಿಂ. ಪಂಡಿತ ಚೆನ್ನಪ್ಪ ಎರೇಸೀಮೆ*



॥ ಓಂ ಶ್ರೀ ಗುರು ಬಸವ ಲಿಂಗಾಯ ನಮಃ ॥

**ಆವಾವ ಕಾಯಕವ ಮಾಡಿದರು ಬಸವೇಶ**
**ಆವಗಂ ಶರಣರನು ಸೇವಿಪೆನು ಬಸವೇಶ**

# ಸಿದ್ಧಗಂಗಾ

ಸಂಪುಟ : ೪೦ ಮಾರ್ಚಿ ೨೦೦೪ ಸಂಚಿಕೆ : ೩


ಸಂಪಾದಕ
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ
ಎಚ್.ಎಸ್. ಸಿದ್ದಗಂಗಪ್ಪ

ಸಂಚಾಲಕ
ಎಂ. ರೇಣುಕಾರಾಧ್ಯ

ಪ್ರಕಾಶಕರು
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ದಗಂಗಾ ಮಠ,
ತುಮಕೂರು ಜಿಲ್ಲೆ – ೫೭೨ ೧೦೪

ಮುದ್ರಕರು :
ಗೀತಾಂಜಲಿ ಗ್ರಾಫಿಕ್ಸ್,
ನಂ.೫, ಎಂ.ಎಸ್.ಆರ್. ಕೈಗಾರಿಕಾ ಬಡಾವಣೆ,
ಗೋಕುಲ, ಬೆಂಗಳೂರು – ೫೬೦ ೦೫೪.
ದೂರವಾಣಿ : ೨೩೬೦೪೦೦೮


ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ

## ಒಳಪುಟಗಳಲ್ಲಿ..........




| ವಿಳಾಸ : | ಚಂದಾ ವಿವರ : | |
|---|---|---|
| "ಸಂಪಾದಕರು", 'ಸಿದ್ದಗಂಗಾ' ಮಾಸಪತ್ರಿಕೆ | ವಾರ್ಷಿಕ ಚಂದಾ | ರೂ. ೧೦೦/– |
| ಶ್ರೀ ಸಿದ್ದಗಂಗಾ ಮಠ, | ಆಜೀವ ಸದಸ್ಯತ್ವ | ರೂ. ೬೦೦/– |
| ತುಮಕೂರು ಜಿಲ್ಲೆ – ೫೭೨ ೧೦೪ | ಬಿಡಿ ಪ್ರತಿ | ರೂ. ೧೦.೦೦ |



## ನೆನಪಿನ ಸಿರಿ ....

''ಮನುಷ್ಯನ ಭಾವಕೋಶ ಬಹುದೊಡ್ಡಕಣಜ. ಇದು ಹುಟ್ಟಿದಂದಿನಿಂದ ಸಾಯುವವರೆಗೆ ಸಂಸ್ಕಾರಗಳನ್ನು ತನ್ನಲ್ಲಿ ತುಂಬುತ್ತಲೂ, ಕೆಲವನ್ನು ಸ್ವೀಕರಿಸುತ್ತಲೂ ಇರುತ್ತದೆ. ಇಲ್ಲಿ ಸಂಗ್ರಹವಾಗಿರುವ ಶಬ್ದಚಿತ್ರ, ದೇಶ, ಕಾಲ, ಜನಜೀವನ, ಸಿಹಿಕಹಿ, ಸುಖದುಃಖ, ಆಮೋದ ಪ್ರಮೋದ, ಸುಳ್ಳು, ಕಳವು, ಹಾದರ, ಪುಣ್ಯಪಾಪ ಮೊದಲಾದ ಅನುಭವಗಳನ್ನು ಸಂಸ್ಕಾರ ರೂಪವಾಗಿ ಹಿಡಿದಿಟ್ಟುಬಿಡುತ್ತದೆ. ಸನ್ನಿವೇಶ ಬಂದಾಗ ಆಯಾಯಭೂತಗಳನ್ನು ಹೊರಹಾಕುತ್ತವೆ. ಭಾವದಲ್ಲಿ ಸಂಗ್ರಹವಾದ ಸಂಸ್ಕಾರಗಳೇ ಬಹುಮಟ್ಟಿಗೆ ಸ್ವಭಾವಗಳಾಗಿ ಮಾನವನನ್ನು ರೂಪಿಸುತ್ತವೆ''. ಈ ಪಕ್ವಗೊಂಡ ನುಡಿಗಳು ದಿನಾಂಕ ೨೦.೨.೨೦೦೪ರಂದು (ಜನನ : ೩.೩.೧೯೧೯). ಲಿಂಗೈಕ್ಯರಾದ ಪಂಡಿತ ಚೆನ್ನಪ್ಪ ಎರೇಸೀಮೆಯವರ ಅನುಭವಕೋಶದಿಂದ ಹೆಕ್ಕಿದೆವು. ಉದ್ಧರಿಸಿದವರು ಆತ್ಮೀಯ ಶ್ರೀ ಟಿ.ಆರ್. ಮಹಾದೇವಯ್ಯನವರು.

ಪಂಡಿತ ಚೆನ್ನಪ್ಪ ಎರೇಸೀಮೆಯವರದು ಸಾಹಸದ ಬದುಕು. ಅಂಗುಲಂಗುಲವಾಗಿ ತಮ್ಮ ಜೀವನಸೌಧವನ್ನು ಕಟ್ಟಿಕೊಂಡ ಸಾತ್ವಿಕಸಿರಿಯ ವಿದ್ವದ್ರತ್ನರು. ಹಾನಗಲ್ಲು ತಾಲ್ಲೂಕಿನ ಹರವಿ ಗ್ರಾಮದ ರೈತ ಕುಟುಂಬದಲ್ಲಿ ಮೊಳಕೆಹೊಡೆದ ಒಂದು ಪುಣ್ಯದ ಬಿತ್ತ ನಾಡಿನುದ್ದಗಲದಲ್ಲಿ ಪ್ರಾಮಾಣಿಕ ಪಾಂಡಿತ್ಯದ ಗಂಧಪರಿಮಳವನ್ನು ಎಂಬತ್ತೈದುವರ್ಷಗಳ ನಿಡುಬಾಳಿನಲ್ಲಿ ಪಸರಿಸಿದ್ದು ಸಾಮಾನ್ಯವಾದುದಲ್ಲ. ''ಒಂಬತ್ತು ರೂಪಗಾರದ ಒಬ್ಬ ಗಾಂವಠೀ ಶಾಲೆಯ ಮೇಸ್ತ್ರು ಕಡುಬಡತನ, ನಿರುತ್ಸಾಹದ ಸನ್ನಿವೇಶದಲ್ಲೂ ಧೈರ್ಯ, ಸಾಹಸ, ಶ್ರದ್ಧಾಸಕ್ತಿಗಳಿಂದ ಹಂತಹಂತವಾಗಿ ಮೇಲೇರಿ ಹೈಸ್ಕೂಲು, ತರಬೇತಿ ಕಾಲೇಜುಗಳಲ್ಲಿ ಭಾಷಾ ಬೋಧಕರಾಗಿ ಕೀರ್ತಿಗಳಿಸುವ ಹಂತಕ್ಕೆ ಏರಿದ ''ಎರೇಸೀಮೆಯವರದು ಒಂದು ವೀರಗಾಥೆ; ಯಶೋಗೀತೆ. ಅವರ 'ನನ್ನ ಕಥೆ'ಯನ್ನೋದಿದವರಿಗೆ ಚೆನ್ನಪ್ಪನವರ ಪ್ರಯತ್ನ ಭಗೀರಥನ ದರ್ಶನವಾಗದಿರದು.

ಎರೇಸೀಮೆಯವರು ೧೮ ಸ್ವತಂತ್ರ ಕೃತಿಗಳನ್ನು, ೯ ಇತರರೊಡನೆ ಸೇರಿ ಸಂಪಾದಿಸಿದ ಸಂಪಾದನಾ ಕೃತಿಗಳನ್ನು, (ಶ್ರೀ ದೇವೀರಪ್ಪ, ಶ್ರೀ ಟಿ.ಆರ್. ಮಹಾದೇವಯ್ಯ, ಡಾ. ರಂ. ಶ್ರೀ ಮುಗಳಿ, ಡಾ. ಜಿ.ಎಸ್. ಶಿವರುದ್ರಪ್ಪ, ಡಾ. ಶಿ.ಚಿ. ನಂದಿಮಠ ಮುಂತಾದ ಪ್ರಬುದ್ಧ ವಿದ್ವಾಂಸರೊಡನೆ), ಬೆಂಗಳೂರು ವಿಶ್ವವಿದ್ಯಾಲಯದ ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆಗೆ ೩ ಲೇಖನಗಳನ್ನೂ, ಪ್ರೌಢಗ್ರಂಥಗಳು – ವಿಶೇಷ ಸಂಚಿಕೆಗಳು – ನಿಯತಕಾಲಿಕಗಳಿಗೆ ಬರೆದ ೭೬ ಲೇಖನಗಳನ್ನೂ, ಕನ್ನಡ ಸಾಹಿತ್ಯ ಪರಿಷತ್ತಿನ ದತ್ತಿ ೫ ಉಪನ್ಯಾಸಗಳನ್ನು, ಬೆಂಗಳೂರು ಆಕಾಶವಾಣಿಯಿಂದ ಪ್ರಸಾರಗೊಂಡ ೧೨ ವಿವಿಧ ನಾಟಕ, ರೂಪಕ, ಭಾಷಣಗಳನ್ನು, ಶೈಕ್ಷಣಿಕ ಪ್ರಸಾರಗಳನ್ನು ನಾಡಿನುದ್ದಕ್ಕೂ – ಬೆಂಗಳೂರು, ಸಿದ್ಧಗಂಗಾ, ನೆಲಮಂಗಲ, ಗುಲ್ಬರ್ಗಾ, ಸೊಲ್ಲಾಪುರ, ವಿಜಾಪುರ, ಮೈಸೂರು, ಧಾರವಾಡ, ಬೆಳಗಾವಿ, ಕಾದರಳ್ಳಿ, ತುಮಕೂರು, ಕನಕಪುರ, ಚಿಕ್ಕಬಳ್ಳಾಪುರ, ದೊಡ್ಡಬಳ್ಳಾಪುರ, ಹೊಸಪೇಟೆ, ಮೀರಾಸಾಬಿಹಳ್ಳಿ, ಚಳ್ಳಕೆರೆ, ತಾಳ್ಯ, ಹೊಸಲಕೆರೆ, ಹಾಸನ, ಶನಿವಾರಸಂತೆ, ಸಕಲೇಶಪುರ, ತಿಪಟೂರು, ದಾವಣಗೆರೆ, ಚನ್ನಪಟ್ಟಣ, ಬಂಗಾರುಪೇಟೆ, ಪಾವಗಡ, ಕೊರಟಗೆರೆ, ಮಾಲೂರು, ಹಿರಿಯೂರು, ಕೊಡ್ಲಪೇಟೆ, ಕಿರುಕೊಡ್ಲಿಮಠ – ಮುಂತಾಗಿ ಪ್ರವಚನ, ಉಪನ್ಯಾಸ, ಭಾಷಣಗಳನ್ನು ನೀಡಿದ ವಿದ್ವಾಂಸರು.

ಪಂಡಿತ ಚೆನ್ನಪ್ಪ ಎರೇಸೀಮೆಯವರು ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ – ೧೯೮೯, ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ – ಕೊಪ್ಪಳ-೧೯೯೨ ಸನ್ಮಾನ, ತುಮಕೂರಿನ ಸಿದ್ಧಾರ್ಥ ಎಜುಕೇಷನ್ ಸೊಸೈಟಿ ಸನ್ಮಾನ-೧೯೯೪, ಬೆಂಗಳೂರು ಗ್ಲಾಸ್ ಹೌಸ್ ಬಸವ ಜಯಂತಿ ಸಮಾರಂಭದಲ್ಲಿ ಸನ್ಮಾನ-೧೯೮೭, ಬೆಂಗಳೂರು ಬಸವ ಸಮಿತಿ ಸಾಹಿತ್ಯ ಪುರಸ್ಕಾರ-೧೯೯೬, ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ ಸನ್ಮಾನ, ವಿಜಯಪುರ-೧೯೯೭, ಉದ್ದಾನೇಶ ಚರಿತೆ ಕಾವ್ಯಪುರಸ್ಕಾರ ಶ್ರೀ ಶಿವರಾತ್ರೀಶ್ವರ ಧಾರ್ಮಿಕ ದತ್ತಿ (ರಿ) – ೧೯೯೭, ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ಶ್ರೀ ಶ್ರೀಗಳವರ ಸುವರ್ಣ ಮಹೋತ್ಸವದಲ್ಲಿ ಸನ್ಮಾನ – ೧೯೮೩, ಶ್ರೀ ಸಿದ್ಧಗಂಗಾ ಶ್ರೀಗಳವರ ೯೧ನೇ ಹುಟ್ಟುಹಬ್ಬ ಗುರುವಂದನ ಸಮಾರಂಭದಲ್ಲಿ ಸನ್ಮಾನ ೧೯೯೮, ಬೆಂಗಳೂರು ಕಾರ್ಪೊರೇಷನ್ ಸನ್ಮಾನ – ೧೯೭೫, ಚಿತ್ರದುರ್ಗ ಮುರುಘಾ ಮಠದಲ್ಲಿ ಸನ್ಮಾನ-೧೯೯೪, ಆದಿಚುಂಚನಗಿರಿಯಲ್ಲಿ ಸನ್ಮಾನ – ೧೯೮೮, ಧರ್ಮಸ್ಥಳ, ಬಿಜಾಪುರಗಳಲ್ಲಿ ಸನ್ಮಾನ ಪಡೆದ ಗೌರವಾನ್ವಿತರು.

ಶ್ರೀ ಚೆನ್ನಪ್ಪನವರು ವಿದ್ಯಾ ಇಲಾಖೆಯ ವಿವಿಧ ಸಮಿತಿಗಳಲ್ಲಿ ಸದಸ್ಯರಾಗಿ ಸೇವೆಸಲ್ಲಿಸಿದ ಸಂಪನ್ಮೂಲ ಶ್ರೀಮಂತರು.

ಶ್ರೀ ಎರೇಸೀಮೆಯವರ ಮತ್ತು ಶ್ರೀ ಸಿದ್ಧಗಂಗಾ ಮಠದ ಬಾಂಧವ್ಯ 'ಮಾತುಮನಂಗಳಿಂದತ್ತತ್ತ'–ವಾದದ್ದು. ಮಠವೆಂದರೆ ಸಾಕು ಭಾವುಕರಾಗುತ್ತಿದ್ದ ಹಿರಿಯರು. ಸ್ವಾಮಿಗಳೆಂದರೆ ಸಾಕು ಮುಂಡೆಮಟ್ಟಕ್ಕೆ ಕೈಜೋಡಿಸಿ ಬಾಗುತ್ತಿದ್ದ ಹರಿಹರಕವಿ ಹೃದಯರು.

(ಮುಂದುವರಿದ ಭಾಗ ೧೯ನೇ ಪುಟಕ್ಕೆ)







## ಬಾಳಿ ಬಯಲಾದವರು

ಬಾಳಗಂಗಯ್ಯ ದೊಡ್ಡ ಹೆಜ್ಜಾಜಿಗ್ರಾಮದಲ್ಲಿದ್ದ ಒಬ್ಬ ಕರ್ಮಯೋಗಿ. ನಿರ್ಲಿಪ್ತ ಚಿತ್ತ. ಆಡಂಬರವಿಲ್ಲದ ಸರಳ ಸ್ವಭಾವಿ. ಕೃಷಿಕಸದ್ಭಕ್ತ. ಮೂರುಗಂಡು ಎರಡು ಹೆಣ್ಣು ಮಕ್ಕಳ ತಂದೆ. ಎಲೆಯ ಮೇಲಿನ ನೀರ ಹನಿಯಂತಿದ್ದವನು. ತೋಟದಲ್ಲಿ ತುಂಡುಪಂಚೆ ಕಟ್ಟಿಕೊಂಡು ಸದಾ ಕಾಯದಲ್ಲಿ ನಿರತನಾಗಿರುತ್ತಿದ್ದ ಮುಗ್ಧ. ಶ್ರದ್ಧೆಗೆ ಕಾಗುಣಿತವಾದವನು. ನಿಷ್ಠೆಗೆ ನಿಯತ್ತು ಕಲಿಸಿದಾತ. ಬಣ್ಣದ ಮಾತಿಲ್ಲ. ಮಿತವಾದ ಮಾತು. ದುಡಿಮೆಯನ್ನು ದೇವರೆಂದು ನಂಬಿದ್ದವನು. ಮನಸ್ಸನ್ನು ವಿಕಾರಕ್ಕೊಳಗಾಗದಂತೆ ಪರಿಶುದ್ಧವಾಗಿಟ್ಟುಕೊಂಡಿದ್ದ ನೇಮಿಷ್ಠ. ಇಂದಿನ ದಿನಮಾನಗಳಲ್ಲಿ ಅವನಂಥವರು ವಿರಳ. ಅತಿವಿರಳ. ನಮ್ಮ ಮಠದಲ್ಲಿ ನಮ್ಮ ಸ್ವಾಮಿಗಳವರ ಕಾಲದಲ್ಲಿ (ಶ್ರೀ ಉದ್ದಾನ ಸ್ವಾಮಿಗಳು) ಸುಬ್ಬಣ್ಣ ಅಂತ ಒಬ್ಬ ದನಕಾಯುವ ಶರಣನಿದ್ದ. ಶ್ರೀಮಠದಲ್ಲಿರುವ ಮರದ ತೋಪನ್ನು ಬೆಳಸಿದಾತ. ಅವನಿಗೆ ಮಣ್ಣು-ಹೊನ್ನುಗಳ ವ್ಯತ್ಯಾಸ ಗೊತ್ತಿರಲಿಲ್ಲ. ಎಲ್ಲಾದರೂ ನಾಲ್ಕಾಣೆ ಒಂದು ನಾಣ್ಯ ಅವನಿಗೆ ಸಿಕ್ಕಿದರೆ ಅದನ್ನು ತಂದು ನಮ್ಮ ಗುರುಗಳಿಗೆ ಕೊಡುತ್ತಿದ್ದ ಮುಗ್ಧ ಮನಸ್ಕ. ಇಂತಹವರು ಅಪರೂಪ. ದೃಷ್ಟಿಪವಿತ್ರರಾದ ಇಂತಹವರೇ ಪವಿತ್ರಾತ್ಮರು. ನಮ್ಮದು ಕೃಷಿ ಪ್ರಧಾನವಾದ ದೇಶ. ಇಂದು ವ್ಯವಸಾಯ ಮಾಡುತ್ತಿರುವ ರೈತ ಲಾಭದೃಷ್ಟಿಯುಳ್ಳವನಾಗಿದ್ದಾನೆ. ಅಧಿಕ ಇಳುವರಿಗಾಗಿ ರಾಸಾಯನಿಕ ಗೊಬ್ಬರ ಬಳಸುತ್ತಿದ್ದಾನೆ. ನೆಲತಾಯಿಯ ಶೋಷಣೆಗೆ ತೊಡಗಿದ್ದಾನೆ. ಭೂಮಿ ಬಂಜರಾಗುವಂತೆ ಮಾಡುತ್ತಿದ್ದಾನೆ. ಹಿಂದಿನವರು ಕೇವಲ ದನದ ಗೊಬ್ಬರ ಬಳಸುತ್ತಿದ್ದರು. ಹೊಂಗೆಸೊಪ್ಪು ಹಾಕುತ್ತಿದ್ದರು. ಹದವರಿತು ಉಳುಮೆ ಮಾಡುತ್ತಿದ್ದರು. ಅವರದು ಲಾಭದೃಷ್ಟಿಯಾಗಿರಲಿಲ್ಲ, ತೃಪ್ತಿ ದೃಷ್ಟಿಯಾಗಿತ್ತು. 'ಮಾಡಿದವರಿಗೆ ನೀಡಿದ ಭಿಕ್ಷ' ಎಂಬಂತಿತ್ತು. ಅವರೂ ಬದಲಾವಣೆಯನ್ನು ಬಯಸುತ್ತಿದ್ದರು. ಆದರೆ ಅವರ ಬದಲಾವಣೆ ವಿಕಾಸಾತ್ಮಕವಾದುದಾಗಿತ್ತು. ವಿಕಾರಾತ್ಮಕವಾದುದಾಗಿರಲಿಲ್ಲ. ಅವರು ತಮಗೆ ಜ್ವರ ಬಂದರೆ ಗುದ್ದಲಿ ಹಿಡಿದು ಭೂಮಿ ಅಗಿಯುತ್ತಿದ್ದರು. ಏಕೆಂದರೆ ಮೈಬೆವರುತ್ತಿತ್ತು. ಬೆವತಾಗ ಮೈಯೊಳಗಿನ ಕಲ್ಮಷ, ವಿಷ ಹೊರಗೆ ಬರುತ್ತಿತ್ತು. ದೇಹ ಗರಿಹಗುರಾಗುತ್ತಿತ್ತು. ದುಡಿಮೆಯ ಅಂತರಾರ್ಥವನ್ನು ಅರಿತ ಅನುಭವಿಗಳು ಅವರು. ವ್ಯರ್ಥಕಾಲಹರಣ ಅವರಿಗೊಗ್ಗದ ಮಾತು. ದುರಾಶೆಯಿರಲಿಲ್ಲ. ಆಶಾ ಜೀವಿಗಳು – ತಮ್ಮನ್ನಾಶ್ರಯಿಸಿದವರನ್ನು, ದನಕರುಗಳನ್ನು, ತೋಟ ಗದ್ದೆಗಳನ್ನು ಸದಾ ಸಂರಕ್ಷಿಸಿದವರು. ಗುರು ಹಿರಿಯರಲ್ಲಿ ಭಕ್ತಿ, ಕಳ್ಳುಬಳ್ಳಿಯಲ್ಲಿ ಅಕ್ಕರೆ, ಆಪ್ತೇಷ್ಟರಲ್ಲಿ ಅಭಿಮಾನ, ನ್ಯಾಯನಿಷ್ಠುರತೆ, ಪರರ ಸ್ವತ್ತನ್ನು ವಿಷವೆಂದು ಕಾಣುವ ನಿರ್ಮಮತೆ, ಬಾಳಗಂಗಯ್ಯ-ಸುಬ್ಬಣ್ಣನಂಥವರದು. ''ವನಸುಮದೊಳೆನ್ನ ಜೀವನವು ವಿಕಸಿಸುವಂತೆ ಮನವನನುಗೊಳಿಸಿಕೊಂಡು'' – ಬಾಳಿ ಬಯಲಾದ ಮುಗ್ಧರು, ಶರಣ ಚಿತ್ತರು.

**(ದಿನಾಂಕ ೨೨.೨.೨೦೦೪ರಂದು ದೊಡ್ಡಹೆಜ್ಜಾಜಿಯಲ್ಲಿ ಲಿಂಗೈಕ್ಯ ಬಾಳಗಂಗಯ್ಯನವರ ಶಿವಗಣಾರಾಧನೆ ಸಂದರ್ಭದ ಶರಣಮೇಳದಲ್ಲಿ ನೀಡಿದ ಆಶೀರ್ವಚನ ಸಂಗ್ರಹ)**

*

ॐ



## ಶ್ರೀ ಸಿದ್ಧಲಿಂಗೇಶ್ವರ ವಚನ

*ಪಿಂಡಾಂಡದ ಮೇಲೆ ಒಂದು ತುಂತಿದ ಭಾಂಡವ ಕಂಡೆನಯ್ಯಾ,*
*ಪಿಂಡಾಂಡವ ಹೊದ್ದದೆ ಅಖಂಡಮಯವಾಗಿದೆ ನೋಡಾ,*
*ಆ ಭಾಂಡವನೆನ್ನ ಮಂಡೆಯಮೇಲೆ ಹೊತ್ತಿರ್ಪೆ*
*ಮೂಲಜ್ಞಾನಾಗ್ನಿಯೆದ್ದು ಮೇಲಣ ಕಮಲವ ತಾಗಲು*
*ಕಮಲದೊಳಗಣಕೊಡ, ಕೊಡದೊಳಗಣ ಉದಕ ಉಕ್ಕಿ ಶರೀರದ ಮೇಲೊಗಲು*
*ಪಿಂಡಕರಗಿ ಅಖಂಡಮಯನಾದೆನು*
*ಅಮೃತಬಿಂದುವ ಸೇವಿಸಿ*
*ನಿತ್ಯಾನಿತ್ಯವಗೆದ್ದು*
*ನಿರ್ಮಲ ನಿರಾವರಣನಾದೆನು*
*ಸೀಮೆಯಮೀರಿ ನಿಸ್ಸೀಮನಾದೆನು.*
*ಪರಮನಿರಂಜನನೊಡಗೂಡಿ*
*ಮಾಯಾ ರಂಜನೆಯಳಿದು*
*ನಿರಂಜನನಾಗಿರ್ದೆನು ಕಾಣಾ*
*ಸಮಸ್ತ ವಿಶ್ವಪ್ರಪಂಚಿಗೆ ಹೊರಗಾಗಿ*
*ನಿಃಪ್ರಪಂಚ ನಿರ್ಲೇಪನಾಗಿರ್ದೆನು ಕಾಣಾ*
*ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.*

ದೇಹ ಆತ್ಮಸಂಬಂಧವಾದ ಸ್ಥೂಲತನು. ಅದರಲ್ಲಿ ಸರ್ವಾಚಾರ ಸಂಪತ್ತಿನಾಚರಣೆಯ ಲಿಂಗವೆಂಬ ಚಿದ್ಬ್ರಾಂಡ. ಅದು ಶ್ರೀಗುರುದೇವನಿಂದ ದೀಕ್ಷಾತ್ರಯದ ಮುಖೇನ ಸಂಬಂಧವಾದುದು. ಅದರಿಂದ ಕ್ರಿಯಾಜ್ಞಾನ ದೃಷ್ಟಿ ನಿದರ್ಶನನಾದವನು ಶರಣ. ಅವನು ದೇಹಾತ್ಮ ಪ್ರಪಂಚಿಯಲ್ಲ. ಪರಿಪೂರ್ಣಾತ್ಮ. ಚಿದ್ಬ್ರಾಂಡ ಸ್ವರೂಪವಾದ ಇಷ್ಟಲಿಂಗವನ್ನು ಬ್ರಹ್ಮರಂಧ್ರ ದಲ್ಲಿ ನಿಃಕಲ ಲಿಂಗವಾಗಿ ಧರಿಸಿಕೊಂಡಿದ್ದಾನೆ ಆ ಶರಣ. ಆಸನ ಬಂಧಾದಿಗಳ ಮೂಲಕ ರೇಚಕ, ಪೂರಕಗಳನ್ನು ನಿಲ್ಲಿಸಿ, ಕೇವಲ ಕುಂಭಕದ ಮೂಲಾಧಾರದಲ್ಲಿಯ ಮೂಲಾಗ್ನಿ ಯನ್ನೆಬ್ಬಿಸಿ, ಸುಷುಮ್ನ ಮಾರ್ಗದಲ್ಲಿ ಕ್ರಮಿಸಿ, ಬ್ರಹ್ಮರಂಧ್ರದ ನಿಃಕಲ ಲಿಂಗದಲ್ಲಿ ಸಂಬಂಧಿಸಿದಾಗ, ಸಹಸ್ರ ದಳದ ಕಮಲ ಮಧ್ಯದ ಚಿದ್ಬ್ರಾಂಡ ಸ್ವರೂಪವಾದ ಲಿಂಗದಲ್ಲಿಯ ಚಿಜ್ಜಲವು ಹೊರಸೂಸಿ, ಸರ್ವಾಂಗದಲ್ಲಿಯೂ ಸರ್ವಾಂಗ ಲಿಂಗವಾಗಿ ಸಂಬಂಧವಾಗುವುದರ ಮುಖೇನ ದೇಹಭಾವವಳಿದು ಲಿಂಗದಲ್ಲಿ ಪರಿಪೂರ್ಣನಾಗುವನು ಶರಣನು. ಅಂತಹ ಶರಣನ ಜ್ಞಾನಾಮೃತವನ್ನು ಸ್ವೀಕರಿಸಿ, ದೇಹಾತ್ಮಭಾವವನ್ನು ಬಿಟ್ಟು, ಮಲತ್ರಯರಹಿತನಾಗಿ, ಮಾಯಾಹರಣ ರಹಿತನಾಗಿ, ಅಂಗಲಿಂಗದ ಖಂಡಿತ ಕ್ರಿಯೆಯನ್ನು ಮೀರಿ, ಲಿಂಗದಲ್ಲಿ ನಿಷ್ಪತ್ತಿ ಯಾದವನಾಗಿ, ಸರ್ವೋತ್ಕರ್ಷವಾಗಿ ರಂಜನೆಯಿಲ್ಲದೆ ಮಹಾಲಿಂಗದಲ್ಲಿ ಏಕನಾಗಿ, ಭೇದಜ್ಞಾನರಹಿತನಾಗ, ರಚನೆಯಿಲ್ಲದಾತನಾಗಿರ್ದುದನು ಕಂಡು, ವನಿತಾದಿ ಸಮಸ್ತ ಜಗತ್ಪ್ರಪಂಚಿನಿಂದ ವಿಲಕ್ಷಣನಾಗಿ, ಪ್ರಪಂಚಾತೀತವಾದ ಪರಶಿವಲಿಂಗವೆ ಆಗಿರುವನು ಶಿವಶರಣನು.

(ಕೃಪೆ : ಷಟ್‌ಸ್ಥಲಜ್ಞಾನಿ ಸೋಮಶೇಖರ ಶಿವಯೋಗಿ ಕೃತ ತೋಂಟದ ಸಿದ್ಧಲಿಂಗೇಶ್ವರನ ಷಟ್‌ಸ್ಥಲ ಜ್ಞಾನಸಾರಮೃತದ ಬೆಡಗಿನ ವಚನ ಟೀಕೆ -ವೀರಶೈವ ಅಧ್ಯಯನ ಸಂಸ್ಥೆ- ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಡಂಬಳ, ಗದಗ)

## ಶ್ರೀ ಸಿದ್ಧಗಂಗಾ ಗುರುಕರುಣಾ ತ್ರಿವಿಧಿ

ಬಸವಣ್ಣನ ನೆನೆನೆನೆದು ಬಸವಣ್ಣನೆ ಆಗಿರುವ
ಬಸವ ಲಿಂಗಜ್ಯೋತಿಯೆನಿಸಿರುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

''ಅರಿವೆಯಲಿ ಇರುವೆ''ಯ ಸೆರೆಹಿಡಿವ ತೆರದಲಿ
ಕರುಣೆ ನೀನೆನ್ನನ್ಹಿಡಿದಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬಸವಣ್ಣನೆ ಶಿವನೆಂದೆ ಬಸವಣ್ಣನೆ ಗುರುವೆಂದೆ
ಬಸವಣ್ಣನೆ ಸಕಲ ಜಗವೆಂದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಲಿಂಗದಲ್ಲಿ ಸಮಭಾವ ಸಮರತಿಯ ಸವಿದುಂಬ
ಸಮಭಾವ ಸುಮಮನದ ಶಿವಸುಮವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿಮ್ಮ ಘನಮಹಿಮರ ನಿಲವ ನಾನರಿಯೆನು
ನಿಮ್ಮ ಪಾದದಲಿ ಸುಳಿವೆನು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮಹವೆ ನೀನಾಗಿದ್ದು ಮಹವನೆ ನೆನೆದಿರುವೆ
ಮಹಕೆ ಮಹವಾಗಿ ನಗುತಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನರಜನ್ಮಮಹವೆಂದೆ ಹರಜನ್ಮಮಾಡೆಂದೆ
ನರನೆ ಹರನಾಗುವುದ ಕಲಿಯೆಂದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಪಂಚಪರುಷದ ಪರಮನಿತ್ಯನಿರಂಜನ
ಪಂಚಾಚಾರವೆ ಪುರುಷರೂಪಾದ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿಮ್ಮ ನೆನೆವುದೆ ನನಗೆ ಪರಮ ಲಿಂಗಾರ್ಚನೆ
ನಿಮ್ಮ ನೆನೆವುದೆ ನನಗೆ ಪರತತ್ವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನೀವೆನಗೆ ಬಸವಣ್ಣ ನೀವೆನಗೆ ಪ್ರಭುದೇವ
ನೀವೆ ಆಗಿರಿವಿರಿ ಚನ್ನಬಸವಣ್ಣ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

**- ಹೆಚ್.ವಿ. ವೀರಭದ್ರಯ್ಯ**





॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

# ಶ್ರೀ ಗುರುವಂದನ ಸಮಾರಂಭ

**ದಿನಾಂಕ 4.4.2004, ಭಾನುವಾರ** **ಬೆಳಿಗ್ಗೆ 10.00 ಘಂಟೆಗೆ**



ಶ್ರೀ ಸಿದ್ಧಗಂಗಾ ಮಠಾಧ್ಯಕ್ಷರಾದ ತ್ರಿವಿಧ ದಾಸೋಹಿಗಳು, ಪರಮತಪಸ್ವಿಗಳೂ, ನಡೆದಾಡುವ ದೇವರೆಂದೇ ಜನಮನದಲ್ಲಿ ಬೆಳಗುತ್ತಿರುವ ಶ್ರೀ ಮ.ನಿ.ಪ್ರ.ಸ್ವ. ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು 1.4.2004ರಂದು 97ನೇ ಶುಭಸಂವತ್ಸರಕ್ಕೆ ಪಾದಾರ್ಪಣೆ ಮಾಡುತ್ತಿದ್ದು, ಆ ಸಂಬಂಧವಾಗಿ 'ಗುರುವಂದನ' ಸಮಾರಂಭವನ್ನು ಶ್ರೀಮಠದಲ್ಲಿ ದಿನಾಂಕ 4.4.2004ರಂದು ಬೆಳಿಗ್ಗೆ 10.00 ಘಂಟೆಗೆ ಏರ್ಪಡಿಸಲಾಗಿದೆ. ಸಮಾರಂಭದಲ್ಲಿ ವಿವಿಧ ಮಠಾಧೀಶರು, ರಾಷ್ಟ್ರದ ಮತ್ತು ರಾಜ್ಯದ ಗಣ್ಯಮಾನ್ಯರು ಭಾಗವಹಿಸುತ್ತಾರೆ. ಇದೇ ಸಂದರ್ಭದಲ್ಲಿ ನಾಡಿನ ವಿವಿಧ ಕ್ಷೇತ್ರಗಳಲ್ಲಿ ಅನುಪಮ ಸೇವೆ ಸಲ್ಲಿಸಿದ ಗಣ್ಯರನ್ನು ಗೌರವಿಸಲಾಗುವುದು.

ತಾವೂ ಸಮಾರಂಭದಲ್ಲಿ ಭಾಗಿಗಳಾಗಿ ಶ್ರೀ ಗುರುಕೃಪೆಗೆ ಪಾತ್ರರಾಗಬೇಕೆಂದು ಕೋರುತ್ತೇವೆ.

*ಶ್ರೀ ಸಿದ್ಧಲಿಂಗ ಸ್ವಾಮಿಗಳು*
ಉತ್ತರಾಧಿಕಾರಿಗಳು ಮತ್ತು
ಶ್ರೀಮಠದ ಶಿಕ್ಷಣ ಸಂಸ್ಥೆಯ ಸಮಸ್ತ ಸೇವಾ ಸಿಬ್ಬಂದಿ ಹಾಗೂ ಭಕ್ತ ಮಂಡಳಿ
ಶ್ರೀ ಸಿದ್ಧಗಂಗಾಮಠ, ತುಮಕೂರು ಜಿಲ್ಲೆ.

## ದೀಕ್ಷಾ ಸಂಸ್ಕಾರ

ಈ ಶುಭ ಸಂದರ್ಭದಲ್ಲಿ ವೀರಶೈವ ವಟುಗಳಿಗೆ ಲಿಂಗ ದೀಕ್ಷಾ ಸಂಸ್ಕಾರವನ್ನು ದಿನಾಂಕ 4.4.2004ರ ಬೆಳಿಗ್ಗೆ 5 ಘಂಟೆಗೆ ಏರ್ಪಡಿಸಲಾಗಿದೆ. ಆಸಕ್ತಿಯುಳ್ಳವರು ಹೆಚ್ಚಿನ ವಿವರಗಳಿಗೆ 3.4.2004ರ ಶನಿವಾರ ಸಂಜೆ 6 ಘಂಟೆಯೊಳಗೆ ಶ್ರೀಮಠದ ಆಡಳಿತಾಧಿಕಾರಿಗಳನ್ನು ಸಂಪರ್ಕಿಸುವುದು. ವಟುಗಳು ಬರುವಾಗ ದೀಕ್ಷೆಗೆ ಬೇಕಾಗುವ ವಸ್ತ್ರ - ಪೂಜಾಸಾಮಗ್ರಿಗಳೊಂದಿಗೆ ಬರುವುದು. ಈ ಅವಕಾಶವನ್ನು ಸದುಪಯೋಗಪಡಿಸಿಕೊಳ್ಳಲು ಕೋರಲಾಗಿದೆ.



## ವಚನಗಳ ವಿಶ್ಲೇಷಣೆ

– ಸಂ. ಡಾ. ಎಲ್. ಬಸವರಾಜು
ವಿಶ್ರಾಂತ ಪ್ರಾಧ್ಯಾಪಕರು,
ಮೈಸೂರು ವಿಶ್ವವಿದ್ಯಾನಿಲಯ,
ಮೈಸೂರು.

*ಎನಗಿಂತ ಕಿರಿಯರಿಲ್ಲ !*
*ಶಿವಭಕ್ತರಿಗಿಂತ ಹಿರಿಯರಿಲ್ಲ !*
*ನಿಮ್ಮ ಪಾದ ಸಾಕ್ಷಿ. ಎನ್ನ ಮನ ಸಾಕ್ಷಿ !*
*ಕೂಡಲಸಂಗಮದೇವ, ಎನಗಿದೇ ದಿಬ್ಯ !*

ಆಗಬೇಕಾದ ಹಲವಾರು ರಚನಾತ್ಮಕ ಕಾರ್ಯಗಳಿಗೆ ಅಪರಿಹಾರ್ಯ ವಿಘ್ನವೆಂದರೆ ಅನ್ಯರ ಶಕ್ತಿಸಾಮರ್ಥ್ಯಗಳನ್ನು ಮಾನ್ಯಮಾಡದ ಅಹಂಕಾರವೇ ಆಗಿದೆ. ಇದರಿಂದ ಮಾನವರ ಶಕ್ತಿ ಹರಿದು ಹಂಚಿ ಹೋಗಿ ಅಪವ್ಯಯವಾಗುತ್ತಿರುವುದಷ್ಟೇ ಅಲ್ಲದೆ, ಅದು ಪರಸ್ಪರ ವಿರುದ್ಧವಾಗಿ ಪ್ರವರ್ತಿಸಿ ಲೋಕದ ಸರ್ವಾಂಗೀಣಸಂವೃದ್ಧಿಯನ್ನು ಸಾಧಿಸಲಡ್ಡಿಯಾಗುತ್ತಿದೆ. ವ್ಯಕ್ತಿಪ್ರತಿಷ್ಠೆಯಿಂದಾಗಿ ಇಷ್ಟು ಸಾಮೂಹಿಕ ನಷ್ಟ ಸಂಭವಿಸುದೆಂಬುದನ್ನು ಮನವರಿಕೆ ಮಾಡಿಕೊಂಡ ಬಸವಣ್ಣನವರು ಅಹಂಕಾರನಿರಸನದ ನಿಲುವನ್ನು ತಳೆದು, ತನಗಿಂತ ಕಿರಿಯರಿಲ್ಲವೆಂದೂ, ಶಿವಭಕ್ತರಿಗಿಂತ ಹಿರಿಯರಿಲ್ಲವೆಂದೂ ಉದ್ಘೋಷಿಸಿದರು. ಜಗತ್ತಿನ ಸುಧಾರಕರೆಲ್ಲ, ಸೇವಾಧುರೀಣರೆಲ್ಲ ಈ ನಿಲುವಿನಲ್ಲಿ ನಿಂತರೆ, ಮಾನವಪ್ರಕರಣವೆಲ್ಲ ರಣವಾಗದೆ ಓರಣವಾಗುವುದು. ಬಸವಣ್ಣನವರಿಗೆ ಈ ಮಾತಿನಲ್ಲಿ ಮತ್ತು ಕಾರ್ಯರೀತಿಯಲ್ಲಿ ಸಂಪೂರ್ಣ ಶ್ರದ್ಧೆಯಿದೆ ಮತ್ತು ನಿಶ್ಚಲನಿರ್ಧಾರವಿದೆ. ಆದುದರಿಂದಲೇ, ಅವರು ಶಿವನ ಪಾದಮುಟ್ಟಿ ಪ್ರತಿಜ್ಞೆ ಮಾಡುವರು. ಇದಕ್ಕೆ ತಪ್ಪಿದರೆ, ಶಿವನ ಪಾದ ತಮ್ಮ ಕೈಗೆ ಕಾದ ಕಬ್ಬಿಣವಾಗಲೆಂದು ಪರಿಚ್ಛೇದಿಸಿವರು.

*ನ್ಯಾಯನಿಷ್ಠೂರಿ, ದಾಕ್ಷಿಣ್ಯಪರನಲ್ಲ !*
*ಲೋಕವಿರೋಧಿ ಶರಣನಾರಿಗಂಜುವನಲ್ಲ !*
*ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ !*

ಸ್ವಂತಕ್ಕೆ ಮತ್ತು ಲೋಕಾಂತಕ್ಕೆ ಹಿತವಾದುದು ಪ್ರಿಯವಲ್ಲದಿದ್ದರೂ, ಅದನ್ನು ಸ್ವಾಗತಿಸುವ ಉದಾರ ಮತ್ತು ಪುರೋಹಿತಪ್ರಜ್ಞೆಯ ಶಿವಶರಣನಾದವನ ಶೀಲದ ವೈಶಿಷ್ಟ್ಯ! ಸಾಧಕ ಬಾಧಕಗಳ ಪೂರ್ವಾಪರವ ವಿಮರ್ಶೆಯಾದ ಮೇಲೂ, ಕಾರ್ಯವಿಧಾನದಲ್ಲಿ ಸಂದಿಗ್ಧ ಪರಿಸ್ಥಿಯೊದಗಿ ಧರ್ಮಸಂಕಟದಲ್ಲಿ ಸಿಕ್ಕಿಬಿದ್ದಾಗ, ಆತ್ಮವಾಣಿ ತೋರಿದ ದಾರಿಯಲ್ಲಿ ಧೀರವಾಗಿ ನಡೆದಲ್ಲದೆ ಗತ್ಯಂತರವಿಲ್ಲ. ಸ್ವಪ್ರಯೋಜನ ಸ್ವಪ್ರತಿಷ್ಠೆಗಳಿಗಲ್ಲದೆ, ಲೋಕ-ಹಿತಾರ್ಥಕ್ಕಾಗಿ ತಾನು ತುಳಿದ ಹಾದಿ ಉಳಿದವರ ಹಾದಿಗಿಂತ ಭಿನ್ನವಾದರೂ, ಭಯಪಡುವುದೇನಿದೆ? ಆ ಹಾದಿಯನ್ನು ಹಿಡಿಯುವ, ಹಿಡಿದ ಹಾದಿಯಲ್ಲಿ ನಡೆಯುವ ಪ್ರೇರಣೆ ಧೋರಣೆಗಳು ತನ್ನಂತರಂಗದ ದೊರೆಯಿಂದ ದೊರೆತಿರುವಾಗ ಶರಣನಾದವನಿಗೆ ಅಂಜುವುದಿನ್ನೇನಿದೆ. ಶಿವಸಾಮಜಶರಣನಿಗೆ ನಡೆದುದೇ ಹಾದಿ, ನುಡಿದುದೇ ವೇದ.

*ಹೊಯ್ದವರೆನ್ನ ಹೊರೆದವರೆಂಬೆನು*
*ಬೈದವರೆನ್ನ ಬಂಧುಗಳೆಂಬೆನು*
*ನಿಂದಿಸಿದವರೆನ್ನ ತಂದೆ-ತಾಯಿಗಳೆಂಬೆನು*
*ಆಳಿಗೊಂಡವರೆನ್ನ ಆಳ್ದರೆಂಬೆನು*
*ಜರಿದವರೆನ್ನ ಜನ್ಮಬಂಧುಗಳೆಂಬೆನು*
*ಹೊಗಳಿದವರೆನ್ನ ಹೊನ್ನಶೂಲದಲಿಕ್ಕಿದವರು*
*ಕೂಡಲಸಂಗಮದೇವ.*

ಕಾರ್ಯಕ್ಷೇತ್ರದ ಉನ್ನತ ಸ್ಥಾನಗಳಲ್ಲಿದ್ದು, ಭವಿತವ್ಯದ ಸೂತ್ರಗಳನ್ನು ಕೈಯಲ್ಲಿ ಹಿಡಿದಿರುವ ಧುರೀಣರಿಗೆ – ಅವರ ಪರಿಜನರೂ, ಪರಮಸ್ನೇಹಿತರೂ, ಸಲಹೆಗಾರರೂ ಸಾಧಕ. ಬಾಧಕಗಳನ್ನು ತೂಗಿ ನೋಡಿ, ನಿಷ್ಪಕ್ಷಪಾತವಾದ ನಿಲವನ್ನೂ ನೀತಿಯನ್ನೂ ಹೇಳುವಷ್ಟು ಮುಂಗಾಣ್ಕೆಯಿಲ್ಲದವರಿರಬಹುದು. ಅಥವಾ ಸ್ವಪ್ರಯೋಜನ ಕಾತರರಾಗಿ ಆ ಜನ ಒಡೆಯನಿಗೆ ರುಚಿಸದಾದೀತೆಂದು, ಹಿತಕಾರಿಯಾದರೂ ಅಪ್ರಿಯವಾದುದನ್ನು ಹೇಳದೆ ಹೋಗಬಹುದು. ಈ ಎರಡೂ ಸಂದರ್ಭಗಳಲ್ಲಿ ತನ್ನ ಓರೆಕೋರೆಗಳತ್ತ ಬೆರಳು ಮಾಡಿ ತೋರದೆ ಬರಿಯ ಹೊಗಳಿಕೆಯಲ್ಲಿ ತನ್ನವರೆನಿಸಿಕೊಂಡವರು ದಾರಿ ತಪ್ಪಿಸುವುದು ಸಹಜ. ಇದರಿಂದಾಗಿ ಪಕ್ಷಪಂಗಡಗಳ ವೈಮನಸ್ಯದ ಕಳೆ ಬೆಳೆದು, ಅಭಿವೃದ್ಧಿಯ ಬೆಳೆ ಕಳೆಗುಂದುವುದು. ಆದುದರಿಂದಲೇ ಬಸವಣ್ಣನವರು ಹೊಗಳಿದರೆನ್ನ ಹೊನ್ನ ಶೂಲದಲಿಕ್ಕಿದವರೆಂದಿರುವರು. ಶೂಲ ಹೊನ್ನಿನದಾದರೇನು ಕಬ್ಬಿಣ್ಣಿನದಾದರೇನು? ಶೂಲೆ ಒಂದೇ! ಹಿತವಾದುದನ್ನು ನಿರ್ದಾಕ್ಷಿಣ್ಯವಾಗಿ, ನಿಷ್ಠುರವಾಗಿ, ಕೊನೆಗೆ, ಝಂಕಿಸಿ ಹಿಂಸಿಸಿ ಹೇಳಿದರೂ, ಅವರೇ ತನ್ನ ನಿಜವಾದ ಹಿತೈಷಿಗಳೆಂದು ಪ್ರತಿಪಕ್ಷವನ್ನು ಪುರಸ್ಕರಿಸಬೇಕು. ಸಾಂಸ್ಥಿಕವಾದ ವಿಸ್ತಾರಕ್ಷೇತ್ರಕ್ಕೆ ಅನ್ವಯಿಸುವ ಈ ಮಾತು, ವೈಯಕ್ತಿಕ ಸಾಧನೆಯ ಸ್ವಾಂತ-ಸ್ವಲ್ಪ-ಕ್ಷೇತ್ರಕ್ಕೂ ಅನ್ವಯಿಸುವುದು.

*ಕಾಯದ ಕಳವಳಕಂಜಿ ಕಾಯಯ್ಯ ಎನ್ನೆನು !*
*ಜೀವನೋಪಾಯಕ್ಕಂಜಿ ಈಯಯ್ಯ ಎನ್ನೇನು !*
*ಯದ್ಭಾವ್ಯಂ ತದ್ಭವತಿ ! ಉರಿಬರಲಿ ! ಸಿರಿಬರಲಿ !!*
*ಬೇಕು-ಬೇಡೆನ್ನೆನಯ್ಯ !*
*ನಾ ನಿಮ್ಮ ಹಾರೆನು ! ಮಾನವರ ಬೇಡೆನು !*
*ಆಣೆ ನಿಮ್ಮಾಣೆ ಕೂಡಲಸಂಗಮದೇವ !*

ಮಾನವರನ್ನು ಬೇಡುವುದಿಲ್ಲವೆನ್ನುವುದು ಮಾನವದೇವನ ಮಾತಾದರೆ, ದೇವರನ್ನೂ ಬೇಡುವುದಿಲ್ಲವೆನ್ನುವುದು ದೇವಮಾನವನ ಮಾತು. ಮಾನವನನ್ನು ಬೇಡುವುದಿಲ್ಲವೆಂದಮೇಲೆ, ಮಾನವನನ್ನು ಆಶ್ರಯಿಸಿ ಪಡೆಯಬಹುದಾದ ಜೀವಿಕೆಗಾಗಿ ದೇವರನ್ನು ಬೇಡುವುದು ಅವಿವೇಕ. ದೈವದಿಂದ ಅಪರಿಹಾರ್ಯವಾಗಿ ಒದಗುವ ಕಾಯದ ಕಳವಳವೆಂಬ ವ್ಯಾಧಿ-ಮರಣಗಳನ್ನು ಪರಿಹರಿಸೆಂದು ದೇವರನ್ನು ಬೇಡುವುದರಿಂದಲಾದರೂ ಪ್ರಯೋಜನವೇನು? ಶರಣನು ಸರಳಜೀವಿ; ಅವನಿಗೆ ಮರಣವೆ ಮಹಾನವಮಿ. ಉರಿ-ಸಿರಿಯೆಂಬ ದ್ವಂದ್ವವನ್ನು ದಾಟಿ ಸ್ವಸ್ಥನಾದವನಿಗೆ, ಮಾನವರಿಂದಾಗಲಿ ದೇವರಿಂದಾಗಲಿ ಬೇಡಿ ಪಡೆಯಬೇಕೆಂಬುದೇನು ಇಲ್ಲ. ಆಗುವುದಾಗಲಿ, ಆಗಬೇಕಾಗಿರುವುದನ್ನು ತ್ಯಾಗದಿಂದ ಆಗಿಸುವೆನೆಂಬುದೇ ಶರಣನ ಹದ.

*(ಕೃಪೆ : ಬಸವ ವಚನಾಮೃತ)*





## ಶರಣರನ್ನು ಕುರಿತ ನಾಟಕಗಳು

– ಡಾ. ಬಸವರಾಜ ಮಲಶೆಟ್ಟಿ
ಸಾಹಿತಿಗಳು,
ಹೊಸಪೇಟೆ, ಬಳ್ಳಾರಿ ಜಿಲ್ಲೆ.

ಗಿರೀಶ ಕಾರ್ನಾಡ ಅವರು ತಮ್ಮ ತಲೆದಂಡ ನಾಟಕದ ಅರಿಕೆಯಲ್ಲಿ ''ನೋಯುವ ಹಲ್ಲಿಗೆ ನಾಲಿಗೆ ಮತ್ತೆ ಮತ್ತೆ ಹೊರಳುವಂತೆ ಪ್ರತಿಯೊಬ್ಬ ಕನ್ನಡಿಗ ಮತ್ತೆ ಮತ್ತೆ ಆ ಯುಗದ ಬೆರಗುಗೊಳಿಸುವ ಪ್ರತಿಭೆಗೆ, ಆ ಉತ್ಸಾಹಕ್ಕೆ, ಮೌಲಿಕ ಪ್ರಶ್ನೆಗಳನ್ನು ಕೇಳುವ ಎದೆಗಾರಿಕೆಗೆ, ಗೆಲುವಿಗೆ ನೋವಿಗೆ ಮರಳುವನು. ಅದನ್ನು ಹೊಸ ಸಂದರ್ಭದಲ್ಲಿ ಅರ್ಥೈಸಲು ಯತ್ನಿಸುವುದು ಅನಿವಾರ್ಯ'' ಎಂದು ಹೇಳಿದ್ದಾರೆ. ಶರಣರ ಬದುಕು ಮತ್ತು ತತ್ತ್ವಗಳು ನಮ್ಮನ್ನು ಪುನಃ ಪುನಃ ಕಾಡುತ್ತಿವೆ; ಪ್ರಚೋದಿಸುತ್ತಿವೆ. ಆದ್ದರಿಂದ ಹಲವು ಮಾಧ್ಯಮಗಳಲ್ಲಿ ಅವು ಅಭಿವ್ಯಕ್ತಿಗೊಳ್ಳುತ್ತಿವೆ. ಅವುಗಳಲ್ಲಿ ನಾಟಕವೂ ಒಂದು. ಸುಮಾರು ಒಂದು ಶತಮಾನದ ಅವಧಿಯಲ್ಲಿ ಅನೇಕ ನಾಟಕಗಳು ಶರಣರ ಬದುಕು ಸಿದ್ಧಾಂತಗಳನ್ನು ಕುರಿತು ರಚನೆಯಾಗಿವೆ. ಕಾಲಕಾಲಕ್ಕೆ ಪ್ರಚುರಗೊಂಡ ಸಾಹಿತ್ಯಿಕ, ಸಾಮಾಜಿಕ ಧೋರಣೆಗಳು, ಚಿಂತನಕ್ರಮಗಳು, ಶರಣರ ನಾಟಕಗಳು ವೈವಿಧ್ಯಮಯವಾಗಿ ರಚನೆಗೊಳ್ಳಲು ಕಾರಣವಾಗಿವೆ. ಬಹಳಷ್ಟು ನಾಟಕಗಳು ಶರಣಸಮೂಹದ ಕೇಂದ್ರ ವ್ಯಕ್ತಿ ಬಸವಣ್ಣನನ್ನು ಕುರಿತಾಗಿವೆ.

೧೯೦೯ರಲ್ಲಿ ರಚನೆಗೊಂಡ ಲಿಂಗಸುಗೂರು ಅಮರಶಾಸ್ತ್ರಿ ಹಿರೇಮಠ ಅವರ 'ಸಂಗೀತ ಬಸವೇಶ್ವರ' ಸದ್ಯಕ್ಕೆ ತಿಳಿದುಬಂದಿರುವಂತೆ ಈ ಪ್ರಕಾರದ ಪ್ರಥಮ ನಾಟಕ. ಶಿವಮೂರ್ತಿಸ್ವಾಮಿ ಕಣವಿಗಿನಮಠ ಅವರು ತಮ್ಮ ಕೊಣ್ಣೂರ ನಾಟಕ ಕಂಪನಿಗಾಗಿ ಈ ನಾಟಕವನ್ನು ಬರೆಸಿದರು. ಲೇಖಕರು ಈ ನಾಟಕ ರಚನೆಯ ಹಿನ್ನೆಲೆಯನ್ನು 'ಶ್ರೀ ಬಸವೇಶ್ವರ ಪುರಾಣ ಶ್ರವಣವನ್ನು ಧನಿಕರಾದ ವೀರಶೈವರಲ್ಲಿ ಹಲವರು ಭಕ್ತ ಸಮೂಹಕ್ಕೆ ಒಮ್ಮೊಮ್ಮೆ ಮಾಡಿಸುತ್ತಿರುವರು. ಈ ಕಾರ್ಯವನ್ನು ಯಥಾವಿಧಿಯಾಗಿ ಕೊನೆಗಾಣಿಸಲು ದ್ರವ್ಯಸಹಾಯವು ವಿಶೇಷ ಬೇಕಾಗಿರುವುದರಿಂದ ಇದನ್ನು ನೂರಕ್ಕೊಬ್ಬರಂತೆ ಮಾಡಿಸುವರು. ಆದಕಾರಣ ವೀರಶೈವ ಸಮಾಜಕ್ಕೆ ಈ ಪುರಾಣದಿಂದ ಆಗಬೇಕಾದಷ್ಟು ಪ್ರಯೋಜನವು ಇತ್ತಿತ್ತಲಾಗಿ ಆಗದಂತಾಗಿದೆ. ಈ ಸ್ಥಿತಿಯನ್ನು ಸ್ವಾಮಿಗಳು (ಶಿವಮೂರ್ತಿಗಳು) ಕಂಡು, ಹತ್ತು ಸಾರೆ ಕೇಳಿದ್ದು, ಒಂದು ಸಾರೆ ನೋಡಿದ್ದಕ್ಕೆ ಸರಿಯಾಗುತ್ತದೆಂದು ಅನುಭವಸಿದ್ಧವಾದ ಸಂಗತಿಯನ್ನು ಲಕ್ಷದಲ್ಲಿ ಶ್ರೀ ಬಸವೇಶ್ವರ ಚರಿತ್ರವನ್ನು ನಾಟಕ ರೂಪದಿಂದ ಪುನಃ ಪುನಃ ರಂಗಭೂಮಿಯ ಮೇಲೆ ಆಡುತ್ತ ಹೋದರೆ ಸ್ವಲ್ಪ ಶ್ರಮದಿಂದ ಅಲ್ಪ ಹಣ ವ್ಯಯದಿಂದ ವೀರಶೈವ ಸಮಾಜಕ್ಕೆ ತಾನೇ ಲಾಭವಾಗುವ ಸಂಭವ ಉಂಟೆಂಬುದನ್ನು ತಿಳಿದು ಈ ನಾಟಕವನ್ನು ಬರೆಯಬೇಕೆಂದು ಸೂಚಿಸಿದರು... ಬಸವ ಪುರಾಣದಲ್ಲಿ ಪ್ರತಿಪಾದಿಸಲ್ಪಟ್ಟ ಚರಿತ್ರಗಳನ್ನೇ ಆ ಶಿವಶರಣರ ಕೃಪಾಬಲದಿಂದ ಸಂಗೀತನಾಟಕ ರೂಪದಲ್ಲಿ ರಚಿಸಿದೆನು'' ಹೀಗೆ ವಿವರಿಸಿದ್ದಾರೆ – ಇಲ್ಲಿ ಉದ್ದೇಶ ಸ್ಪಷ್ಟವಿದೆ. ಆಧುನಿಕತೆಯ ಆವಿರ್ಭಾವದ ಆ ಸಂದರ್ಭದಲ್ಲಿ ಜನಸಮೂಹಗಳು ತಮ್ಮ ತಮ್ಮ ಮತಗಳ ಹೆಸರಿನಲ್ಲಿ ಸಂಘಟನೆಗೊಳ್ಳುತ್ತಿದ್ದವು. ವೀರಶೈವರು ಇದಕ್ಕೆ ಹೊರತಾದ ವರಲ್ಲ. ವೀರಶೈವರಲ್ಲಿ ಸ್ವಾಭಿಮಾನ – ಜಾಗೃತಿ ಮೂಡಿಸಲು ಬಸವಣ್ಣ ಅವಶ್ಯಕವೆನಿಸಿದ. ಪುರಾಣಗಳಲ್ಲಿ ಅಡಗಿದ್ದ ಬಸವಣ್ಣನನ್ನು ರಂಗಭೂಮಿಯ ಬಹಿರಂಗಕ್ಕೆ ಕರೆತರಲಾಯಿತು. ಅಮರಶಾಸ್ತ್ರಿಗಳ ನಾಟಕದ ಬಸವಣ್ಣ 'ಪುರಾಣಪುರುಷ ಬಸವಣ್ಣ' ಭಾವುಕ ಜನತೆಗೆ ಪುರಾಣದ ಹಿನ್ನೆಲೆಯಲ್ಲಿಯೇ ಬಸವಣ್ಣನವರನ್ನು ಪರಿಚಯಿಸುವ ಅನಿವಾರ್ಯ ಸಂದರ್ಭ ಅದಾಗಿತ್ತು. ಬಸವಪುರಾಣದ ಮುಖ್ಯ ಕತೆಯನ್ನು ಹಾಗೂ ಕೆಲವು ಉಪಕತೆಗಳನ್ನು ದೃಶ್ಯಗಳಲ್ಲಿ ವಿಂಗಡಿಸಲಾಗಿದೆ. ಆರಂಭ ದಲ್ಲಿ ಸಂಸ್ಕೃತನಾಟಕ ಮಾದರಿಯಲ್ಲಿ ಸೂತ್ರಧಾರ – ನಟಿಯರ ಸಂಭಾಷಣೆ ಯಿದೆ. ಬಸವಣ್ಣ ಒಬ್ಬ ಐತಿಹಾಸಿಕ ವ್ಯಕ್ತಿಯೆಂಬುದು ಅರಿವಿಗೆ ತಂದು ಕೊಳ್ಳದೆ ಪುರಾಣದ ಅಂಶಗಳನ್ನು ದೈವೀಪಾತ್ರಗಳನ್ನು ಧಾರಾಳವಾಗಿ ಬೆರೆಸಲಾಗಿದೆ. ಪಾತ್ರಗಳಿಗೆ ವ್ಯಕ್ತಿತ್ವದ ಗಟ್ಟಿತನವಿಲ್ಲ. ಒಂದು ಸಂದರ್ಭದಲ್ಲಿ ಬಿಜ್ಜಳನು ಬಸವಣ್ಣನಿಗೆ 'ನೀನೇ ರಾಜ್ಯವನ್ನು ಪಾಲಿಸು; ಎಲ್ಲವನ್ನು ನಿನಗೇ ಒಪ್ಪಿಸಿದ್ದೇನೆ' ಎಂದು ಹೇಳುವನು. ಸಂಗಯ್ಯನೆಂಬುವನು ಸೂಳೆಗೆಯ್ಯುವ ಪ್ರಸಂಗವನ್ನು ಹಾಸ್ಯಕ್ಕಾಗಿ ಬಳಸಿಕೊಳ್ಳಲಾಗಿದೆ. ಮನರಂಜನೆಯ ಉದ್ದೇಶಕ್ಕಾಗಿ ಬಸವಣ್ಣ ಬಿಜ್ಜಳನ ಆಸ್ಥಾನಕ್ಕೆ ಬಂದು ಕುಳಿತಕೂಡಲೆ 'ನಾಚ್' ಏರ್ಪಡಿಸಲಾಗಿದೆ. ಒಟ್ಟಾರೆ ಈ ನಾಟಕದ ಬಸವಣ್ಣ, ಪವಾಡ ಪುರುಷನಾಗಿದ್ದಾನೆ. ಎಲ್ಲಿಯೂ ತಾತ್ವಿಕ ಚರ್ಚೆಗೆ ಅವಕಾಶ ನೀಡದೆ ಘಟನೆಗಳನ್ನು ಭಾವುಕ ನೆಲೆಯಲ್ಲಿ ಪೋಣಿಸಲಾಗಿದೆ. ನಾಟಕದ ಹೆಸರೇ ಸೂಚಿಸುವಂತೆ ಇದು ಸಂಗೀತ ನಾಟಕ. ಅಂದಿನ ನಾಟಕಗಳು ಸಂಗೀತ ಪ್ರಧಾನ ಪ್ರಯೋಗಗಳಾಗಿದ್ದವು. ಈ ನಾಟಕದಲ್ಲಿ ಸುಮಾರು ಎಂಭತ್ತು ಹಾಡುಗಳಿವೆ. ಹಾಡುಗಳಿಗೆ ಮರಾಠಿ ಪಾರಸಿ ಜನಪ್ರಿಯ ನಾಟಕಗಳ ಧಾಟಿ – ಚಾಲಿ ಸೂಚಿಸಲಾಗಿದೆ. ಇಲ್ಲಿ ಬಳಕೆಯಾಗಿರುವ ಮೂರು ಸಾಲಿನ 'ಸಾಕಿ' ಎಂಬ ಹಾಡಿನ ಪ್ರಕಾರ ವಿಶೇಷವಾದುದು. ಹೀಗೆ ಅಂದಿನ ಅಭಿರುಚಿಗೆ ತಕ್ಕಂತೆ ಆಕರ್ಷಕ ಧಾಟಿಯ ಸಮೃದ್ಧ ಹಾಡುಗಳಿಂದಾಗಿ ಕೊಣ್ಣೂರ ಕಂಪನಿಯ 'ಸಂಗೀತ ಬಸವೇಶ್ವರ' ನಾಟಕ ಜನಪ್ರಿಯವಾಯಿತು.

ಚಿಕ್ಕೋಡಿ ಶಿವಲಿಂಗಶಾಸ್ತ್ರಿಗಳು ೧೯೩೦ರ ಸುಮಾರಿಗೆ ರಚಿಸಿದ 'ಅಸ್ಪೃಶ್ಯೋದ್ಧಾರ, ಬಸವಣ್ಣನನ್ನು ವರ್ತಮಾನದ ಹಿನ್ನೆಲೆಯಲ್ಲಿ ಕಂಡುಕೊಳ್ಳುವ ಪ್ರಯತ್ನವಾಗಿದೆ. ಅಷ್ಟೊತ್ತಿಗಾಗಲೆ ಗಾಂಧೀಜಿಯವರ ಅಸ್ಪೃಶ್ಯತಾ ನಿವಾರಣಾ ಚಳುವಳಿ ಪ್ರಜ್ಞಾವಂತ ಭಾರತೀಯರನ್ನು ತಟ್ಟಿತ್ತು. ಅಸ್ಪೃಶ್ಯತೆಯನ್ನು ಪಾಪ ಎಂದು ಪರಿಗಣಿಸುವ ಒಂದು ವರ್ಗ ಹುಟ್ಟಿಕೊಂಡಿತ್ತು. ಈ ವರ್ಗಕ್ಕೆ ಬಸವಣ್ಣನ ಬದುಕು ಪ್ರೇರಣಾತ್ಮಕವಾಗಿ ಕಂಡಿತು.

ಮೂಲತಃ ಬಸವಾಭಿಮಾನದ ಹಿನ್ನೆಲೆಯಲ್ಲಿ ಈ ನಾಟಕ ಹುಟ್ಟಿಕೊಂಡಿದ್ದರೂ ಬಸವಣ್ಣನ ಜಾತಿರಹಿತ ಸಮಾಜರಚನೆಯ ಪ್ರಯತ್ನ ಹೆಚ್ಚು ಢಾಳವಾಗಿ ಕಂಡಿತು. ಪ್ರಸ್ತುತ ರಾಷ್ಟ್ರೀಯ ವಿಚಾರವನ್ನು ಒಬ್ಬ ಧಾರ್ಮಿಕ ವ್ಯಕ್ತಿಯ ಮೂಲಕ ಪ್ರಸ್ತುತಗೊಳಿಸಿದರೆ ಹೆಚ್ಚು ಪರಿಣಾಮಕಾರಿಯಾಗುತ್ತದೆಂಬ ಸತ್ಯವನ್ನು ಶಿವಲಿಂಗಶಾಸ್ತ್ರಿಗಳು ಅರ್ಥಮಾಡಿ ಕೊಂಡಿದ್ದರು. ಈ ನಾಟಕದ ಪ್ರಯೋಗದಿಂದ ರಾಷ್ಟ್ರೀಯ ಚಳುವಳಿಗೆ ಪ್ರೋತ್ಸಾಹ ದೊರೆತಂತೆ ಬಸವಣ್ಣನ ವ್ಯಕ್ತಿತ್ವಕ್ಕೆ ಹೊಸ ಅರ್ಥ ಪ್ರಾಪ್ತವಾಯಿತು.

ಜೋಳದರಾಶಿ ದೊಡ್ಡನಗೌಡರ 'ಕ್ರಾಂತಿಪುರುಷ ಬಸವಣ್ಣ' (೧೯೪೫) ಒಂದು ಗಮನಾರ್ಹ ಕೃತಿ. ಕನ್ನಡ ರಂಗಭೂಮಿಯ ಪರಿಪೂರ್ಣ ನಟರೆಂದು ಹೆಸರಾದ ರಾಘವರ ಸೂಚನೆ, ಮಾರ್ಗದರ್ಶನ ದಲ್ಲಿ ಈ ನಾಟಕ ರಚನೆಗೊಂಡಿತೆಂಬುದನ್ನು ಮರೆಯಲಾಗದು. ಪಾಶ್ಚಾತ್ಯ ಗಂಭೀರ ನಾಟಕಗಳ ಸಾರವನ್ನು ಗ್ರಹಿಸಿದ್ದ ರಾಘವರು ಬಸವಣ್ಣನನ್ನು ಪೌರಾಣಿಕ ಬಲೆಯಿಂದ ಬಿಡಿಸುವ ಹಂಬಲವುಳ್ಳವರಾಗಿದ್ದರು. ದೊಡ್ಡನಗೌಡರು ವಚನಸಾಹಿತ್ಯದ ಒಬ್ಬ ನಿಷ್ಠಾವಂತ ಅಭ್ಯಾಸಿ. ಈ ವಚನ ಸಾಹಿತ್ಯದ ಅಧ್ಯಯನ ಪರಂಪರೆ ಅಷ್ಟೊತ್ತಿಗಾಗಲೆ ತನ್ನ ಗಟ್ಟನೆಲೆಯನ್ನು ಪಡೆದುಕೊಂಡಿತ್ತು. ಸಮಕಾಲೀನ ಸಾಮಾಜಿಕ, ರಾಜಕೀಯ ಸಿದ್ಧಾಂತಗಳ ಹಿನ್ನೆಲೆಯಲ್ಲಿ ವಚನಗಳನ್ನು ವ್ಯಾಖ್ಯಾನಿಸುವ ಕ್ರಮ ಮೊದಲಾಗಿತ್ತು. ಪುರಾಣದ ಬಸವಣ್ಣ ಹಿಂದೆ ಸರಿದು ಸಾಮಾಜಿಕ ಕಾರ್ಯಕರ್ತನಂಥ ಬಸವಣ್ಣ ಮುಂದೆ ಕಾಣುತ್ತಿದ್ದ. ಇದಿಷ್ಟು ಹಿನ್ನೆಲೆಯಲ್ಲಿ ದೊಡ್ಡನಗೌಡರು ನಾಟಕ ರಚಿಸಿದರು.

ದೊಡ್ಡನಗೌಡರು ಪ್ರತಿಭಾವಂತ ರಂಗನಟರು, ಮತ್ತು ನಿರ್ದೇಶಕರು. ನಾಟಕದ ಸಾಹಿತ್ಯ ಮತ್ತು ರಂಗಪ್ರಯೋಗಗಳೆರಡರ ಅಂತರಂಗ ಬಲ್ಲವರು. ಹೀಗಾಗಿ ಅವರ 'ಕ್ರಾಂತಿಪುರುಷ ಬಸವಣ್ಣ' ನಿರೀಕ್ಷಿತ ಉದ್ದೇಶ ಫಲಿಸುವ ರಂಗಕೃತಿಯಾಗಿದೆ. ಕ್ರಮಬದ್ಧ ಕಥಾಚಲನೆ ಹಾಗೂ ವ್ಯವಸ್ಥಿತ ದೃಶ್ಯನಿರ್ಮಾಣ ಇಲ್ಲಿವೆ. ಜನಜನಿತ ಪುರಾಣಕತೆಯ ಉಸಾಬರಿಗೆ ಹೋಗದೆ ಸಂಪೂರ್ಣವಾಗಿ ಹೊಸ ಸನ್ನಿವೇಶಗಳನ್ನು ಅರ್ಥಪೂರ್ಣವಾಗಿ ಕಲ್ಪಿಸಲಾಗಿದೆ. ಹಾಗೆ ನೋಡಿದರೆ ಬಸವಣ್ಣ ನೇರವಾಗಿ ರಂಗದ ಮೇಲೆ ಕಾಣಿಸಿಕೊಳ್ಳುವುದು ತೀರಾ ಕಡಿಮೆ. ಇತರ ಪಾತ್ರಗಳ ಮಾತು ಚರ್ಚೆಗಳಲ್ಲಿ ಬಸವಣ್ಣನ ವ್ಯಕ್ತಿತ್ವ ಅರಳಿನಿಂತಿದೆ : ಬರಗಾಲ ಬಂದಿದೆ. ಇದಕ್ಕೆ ಪರಿಹಾರವಾಗಿ ಪುರೋಹಿತರು ಅರಮನೆಯಲ್ಲಿ ಪರ್ಜನ್ಯಯಾಗ ನಡೆಸುವರು. ಹಸಿದ ಜನ ಯಾಗಶಾಲೆಯ ಭೋಜನಗೃಹಕ್ಕೆ ನುಗ್ಗಿದಾಗ ಅವರನ್ನು ಬಂಧಿಸಲಾಗುವುದು. ಆಗ ಬಸವಣ್ಣ 'ಬಡವರು ಹಸಿದವರು ಬಂಧನದಲ್ಲಿರುವಾಗ ನಾನು ಅರಮನೆಯಲ್ಲಿ (ಅಧಿಕಾರದಲ್ಲಿ) ಇರಲಾರೆನೆಂದು' ನಿಷ್ಠುರವಾಗಿ ಹೇಳಿದಾಗ ಪರಿಸ್ಥಿತಿ ಗಂಭೀರವಾಗುತ್ತದೆ. ಬಸವಣ್ಣನ ಒತ್ತಾಯದ ಫಲವಾಗಿ ರಾಜಪುರೋಹಿತರು ಬಡವರಿಗೆ ಸಂತರ್ಪಣೆ ನಡೆಸಲು ಒಪ್ಪಿಕೊಳ್ಳುವರು. ಬಸವಣ್ಣ ತನ್ನ ಮುಗ್ಧಭಕ್ತ ಎಂಥ ಅಪಾಯಕಾರಿ ಸ್ಥಿತಿ ತಲುಪಿದೆಯೆಂಬುದನ್ನು ಅರ್ಥಮಾಡಿಕೊಳ್ಳುತ್ತಾನೆ. ಮಹಾಮನೆಯಲ್ಲಿ ನಿತ್ಯವೂ ನಡೆಸುವ ಜಂಗಮದಾಸೋಹದಿಂದ ಉಂಡಾಡಿ ನಿರುದ್ಯೋಗಿ ಗುಂಪು ಬೆಳೆಯುತ್ತಿದೆಯೆಂದು ತಿಳಿದಕೂಡಲೆ ಎಲ್ಲರಿಗೂ ಕಾಯಕವನ್ನು ಕಡ್ಡಾಯಗೊಳಿಸುತ್ತಾನೆ. ಹರಳಯ್ಯನ ಮಗ ಶೀಲ, ಮಧುವರಸನ ಮಗಳು ನೀಲ ಪರಸ್ಪರರನ್ನು ಪ್ರೀತಿಸುವ ದೃಶ್ಯವನ್ನು ಉಚಿತ ಕ್ರಮದಲ್ಲಿ ಸಂಯೋಜಿಸಲಾಗಿದೆ. ನಾಟಕದಲ್ಲಿ ಪ್ರಯೋಗದ ದೃಷ್ಟಿಯಿಂದ ಇಂಥ ಪ್ರಣಯದ ದೃಶ್ಯ ಅತ್ಯವಶ್ಯ. ಅವರಿಬ್ಬರ ಮದುವೆಗೆ ಪುರೋಹಿತರ ಒತ್ತಾಯಕ್ಕೆ ಮಣಿದು ಬಿಜ್ಜಳ ತಡೆಯಾಜ್ಞೆ ಕಳಿಸುತ್ತಾನೆ. ಆದರೆ ಅಷ್ಟರಲ್ಲಿ ಮದುವೆ ನಡೆದುಬಿಡುತ್ತದೆ. ಹರಳಯ್ಯ ಮಧುವರಸರಿಗೆ ಮರಣದಂಡನೆ ವಿಧಿಸಿದಾಗ ಭಗ್ನಹೃದಯಿಯಾದ ಬಸವಣ್ಣ ಕಲ್ಯಾಣ ತ್ಯಜಿಸುತ್ತಾನೆ. ಹಲವು ಕಾಲ್ಪನಿಕ ಪಾತ್ರಗಳು ದೃಶ್ಯಗಳು ಒಟ್ಟಾರೆ ಬಸವಣ್ಣನ ಕ್ರಾಂತಿಯ ಪ್ರತಿಬಿಂಬಗಳಾಗಿವೆ. ತಿಳಿಹಾಸ್ಯದ ಲೇಪನವಿರುವ ಪ್ರಸ್ತುತ ನಾಟಕ ಯಶಸ್ವಿ ಪ್ರದರ್ಶನಗಳನ್ನು ಕಂಡಿದೆ. ಸಮಯೋಚಿತವಾಗಿ ಮೂಲದ ವಚನಗಳನ್ನು ಬಳಸಿಕೊಂಡು ಸ್ವತಂತ್ರ ಹಾಡುಗಳನ್ನು ಪದ್ಯಗಳನ್ನು ಪ್ರಯೋಗದ ಆಕಾರಕ್ಕೆ ಹೊಂದಿಕೆಯಾಗುವಂತೆ ಸೇರಿಸಲಾಗಿದೆ. ದೊಡ್ಡನಗೌಡರ ಬಸವಪ್ರೀತಿ ಭಾವುಕವಾದುದಲ್ಲ; ತತ್ವಾಭಿಮಾನ, ಮಾನವೀಯತೆಗಳಿಂದ ಪುಷ್ಟಿಗೊಂಡ ಆರೋಗ್ಯಕರ ಪ್ರೀತಿಯೆಂಬುದು ಈ ನಾಟಕದಲ್ಲಿ ವ್ಯಕ್ತವಾಗಿದೆ.

'ಜಗಜ್ಯೋತಿ ಬಸವೇಶ್ವರ' (೧೯೪೯) ಅನಕೃ ಅವರ ಮಹತ್ವಾಕಾಂಕ್ಷೆಯ ನಾಟಕ. ಒಬ್ಬ ಹೆಸರಾಂತ ಸಾಹಿತಿ ಕಂಪನಿಗಾಗಿ ನಾಟಕ ರಚಿಸಿದ ಅಪರೂಪದ ಉದಾಹರಣೆಯಿದು. ಅನಕೃ ಇದನ್ನು ಗುಬ್ಬಿ ಕಂಪನಿಗಾಗಿ ಬರೆದರು. ಕಾರಣಾಂತರಗಳಿಂದ ಗುಬ್ಬಿ ಕಂಪನಿ ಇದನ್ನು ಪ್ರಯೋಗಿಸಲಿಲ್ಲ. ಹಿರಣ್ಣಯ್ಯನವರು ಈ ನಾಟಕವನ್ನು ತುಂಬಾ ಯಶಸ್ವಿ ಯಾಗಿ ಪ್ರಯೋಗಿಸಿದರು. ಇಷ್ಟೊತ್ತಿಗೆ ಕರ್ನಾಟಕದಲ್ಲಿ ರಂಗಭೂಮಿ ಹವ್ಯಾಸಿ, ವೃತ್ತಿ ಎಂಬ ಸ್ಪಷ್ಟವಾದ ಕವಲುಗಳನ್ನು ಹೊಂದಿತ್ತು. ವೃತ್ತಿ ನಾಟಕಗಳು ಸಾಹಿತ್ಯಿಕವಾಗಿ ತೀರ ಕಳಪೆ. ಹವ್ಯಾಸಿ ನಾಟಕಗಳು ಬೌದ್ಧಿಕ ಭಾರಹೊತ್ತು ಅರ್ಥವಾಗದ ರಚನೆಗಳು ಎಂಬ ಭಾವನೆ ರೂಢಿಗೆ ಬರುತ್ತಿದ್ದ ಆ ಸಂದರ್ಭದಲ್ಲಿ ಅನಕೃ ಒಂದು ಸುವರ್ಣಮಾರ್ಗ ಕಂಡುಕೊಳ್ಳಲು ಪ್ರಯತ್ನಿಸಿದರು. ಅವರ ಪ್ರಯತ್ನದ ಫಲವೇ 'ಜಗಜ್ಯೋತಿ ಬಸವೇಶ್ವರ'. ಪುರಾಣಗಳಲ್ಲಿ ಚಿತ್ರಿತವಾಗಿರುವ ಮತೀಯವಾದ ಬಸವಣ್ಣನ ಚಿತ್ರವನ್ನು ಅಳಿಸಿ, ದಯೆ ಶಾಂತಿ ಸಹನೆ ಸೌಹಾರ್ದತೆಗಳ ವಿಶ್ವಧರ್ಮಿ ಬಸವಣ್ಣನ ಚಿತ್ರ ನೀಡುವುದು ಅನಕೃ ಉದ್ದೇಶ. ಬಸವಣ್ಣನ ವಚನಗಳನ್ನಾಧರಿಸಿ ಅವನಿಗೆ ಹೊಸ ವ್ಯಕ್ತಿತ್ವ ರೂಪಿಸಲಾಗಿದೆ. ಬಸವ ಬಿಜ್ಜಳರ ಸಂಬಂಧವನ್ನು ಆತ್ಮೀಯವಾಗಿ ಕಲ್ಪಿಸಲಾಗಿದೆ. ಅವರದು ಕೌಟುಂಬಿಕವಾದ ಪ್ರೀತಿಯ ಸಂಬಂಧ. ಬಿಜ್ಜಳನ ಹೆಂಡತಿ ಶಾಂತಮತಿ ಮತ್ತು ಮಗ ಕುಮಾರನೊಂದಿಗೆ ಬಸವಣ್ಣ ತುಂಬಾ ಅಕ್ಕರತೆಯಿಂದ ನಡೆದುಕೊಳ್ಳುತ್ತಾನೆ. ಬಸವಣ್ಣನ ಕಲ್ಯಾಣವೆಂಥದು? ಒಬ್ಬ ಪೌರಹೇಳುತ್ತಾನೆ : ''ಕಲ್ಯಾಣದಲ್ಲಿ ಸೈನ್ಯದ ಕಾಟವಿಲ್ಲ, ಶ್ರೀಮಂತರ ಬಾಧೆಯಿಲ್ಲ, ಅಧಿಕಾರಿಗಳ ಸುಲಿಗೆಯಿಲ್ಲ'' ಇಂಥ ಸುಖೀ ನಗರವನ್ನು– ರಾಜ್ಯವನ್ನು ರೂಢಿಗೆ ತಂದ ಬಸವಣ್ಣನ ಬಗೆಗೆ ಗೌರವ ಮೂಡದೆ ಇರುತ್ತದೆಯೇ?

ಐವತ್ತರ ದಶಕದಲ್ಲಿ ಏಣಗಿ ಬಾಳಪ್ಪನವರು ಪ್ರಾರಂಭಿಸಿದ ''ಕಲ್ಯಾಣ ಕ್ರಾಂತಿ'' ಅಥವಾ 'ಜಗಜ್ಯೋತಿ ಬಸವೇಶ್ವರ' ಒಂದು ವಿಶಿಷ್ಟ ನಾಟಕ. ಅವರು ತಮ್ಮ ಕಂಪನಿಗಾಗಿ ಈ ನಾಟಕ ರಚಿಸಿದರು. ಇದು ಸಂಪೂರ್ಣ ಸ್ವತಂತ್ರ ಕೃತಿಯಲ್ಲ. ಈ ಮೊದಲು ಚಿಕ್ಕೋಡಿ ಶಿವಲಿಂಗ ಶಾಸ್ತ್ರಿಗಳು ಬರೆದಿದ್ದ 'ಅಸ್ಪೃಶ್ಯೋದ್ಧಾರ' ಮತ್ತು ಜೋಳದರಾಶಿ ದೊಡ್ಡನಗೌಡರ 'ಕ್ರಾಂತಿಪುರುಷ ಬಸವಣ್ಣ' ಇವೆರಡನ್ನು ಸಮನ್ವಯಗೊಳಿಸಿ ರಚಿಸಿದ ನಾಟಕವಿದು. ಬಸವಣ್ಣನ ಕ್ರಾಂತಿ ಮತ್ತು ಮಾನವೀಯತೆಗಳಿಗೆ ಒತ್ತುಕೊಟ್ಟು ಹಲವಾರು ನಾಟಕೀಯ ಅಂಶಗಳನ್ನು ಉಚಿತವಾಗಿ ಅಳವಡಿಸಿಕೊಂಡ ಬಾಳಪ್ಪನವರ ನಾಟಕ ರಂಗ ಪ್ರಯೋಗದ ದೃಷ್ಟಿಯಿಂದ ತುಂಬಾ ಯಶಸ್ವಿಯಾದ ಕೃತಿ. ಈ ನಾಟಕದಲ್ಲಿ ಬಸವಣ್ಣನ ಪಾತ್ರ





ಶ್ರೀ ಸಿದ್ಧಗಂಗಾ ಮಠದಲ್ಲಿ ಶ್ರೀ ಸಿದ್ಧಲಿಂಗೇಶ್ವರ ನಾಟಕ ಕಲಾಸಂಘದ ಕಲಾವಿದರು ಕಳೆದ ಅನೇಕ ವರ್ಷಗಳಿಂದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಕೃಪಾಶೀರ್ವಾದ ಮತ್ತು ದಿವ್ಯ ಮಾರ್ಗದರ್ಶನದಲ್ಲಿ 'ಜಗಜ್ಯೋತಿ ಬಸವೇಶ್ವರ' ನಾಟಕವನ್ನು ಗ್ರಾಮಾಂತರ ಬಸವಜಯಂತಿ ಕಾರ್ಯಕ್ರಮದ ಅಂಗವಾಗಿ ಪ್ರದರ್ಶಿಸುತ್ತಿದ್ದಾರೆ. ಈಗಾಗಲೇ ೬೫೦ಕ್ಕೂ ಹೆಚ್ಚು ಪ್ರದರ್ಶನಗಳನ್ನು ಯಶಸ್ವಿಯಾಗಿ ಪೂರೈಸಿ ಜನಮನವನ್ನು ಗೆಲ್ಲುವಲ್ಲಿ ಯಶಸ್ವಿಯಾಗಿದೆ ಈ ಎಲ್ಲ ಪ್ರದರ್ಶನಗಳನ್ನು ಪರಮಪೂಜ್ಯ ಶ್ರೀ ಶ್ರೀಗಳವರು ವೀಕ್ಷಿಸಿ ಮಾರ್ಗದರ್ಶನ ನೀಡುತ್ತಿದ್ದಾರೆ. ಗ್ರಾಮೀಣ ಪ್ರದೇಶದ ಜನರಿಗೆ ಬಸವಣ್ಣನವರ ಆದರ್ಶ ಸಿದ್ಧಾಂತಗಳನ್ನು ಪರಿಚಯ ಮಾಡಿಕೊಡುವಲ್ಲಿ ಈ ನಾಟಕತಂಡ ಅಮೂಲ್ಯ ಕೊಡುಗೆಯನ್ನು ನೀಡುತ್ತಾ ಬಂದಿದೆ.

ವಹಿಸುತ್ತಿದ್ದ ಏಣಗಿ ಬಾಳಪ್ಪನವರು ಉತ್ತರ ಕರ್ನಾಟಕದ ಪ್ರೇಕ್ಷಕರಿಗೆ ಬಸವಣ್ಣನನ್ನು ಪರಿಚಯಿಸಿದ ಕೀರ್ತಿಗೆ ಪಾತ್ರರಾಗಿದ್ದಾರೆ.

ಬಾಳಪ್ಪನವರ ಸಮಕಾಲೀನ ಮತ್ತು ನಂತರದ ಹಲವಾರು ನಾಟಕ ಕಂಪನಿಗಳು ಬಸವಣ್ಣನನ್ನು ಕುರಿತು ನಾಟಕ ಪ್ರದರ್ಶಿಸಿದವು. ಚಿತ್ತರಗಿ ಗಂಗಾಧರಶಾಸ್ತ್ರಿ ಮತ್ತು ನಲವಡಿ ಶ್ರೀಕಂಠಶಾಸ್ತ್ರಿಗಳು ರಚಿಸಿದ 'ಬಸವೇಶ್ವರ', ಪುಟ್ಟರಾಜ ಗವಾಯಿಗಳ 'ಭಗವಾನ್ ಬಸವೇಶ್ವರ', ಎಚ್.ಟಿ. ಮಹಾಂತೇಶ ಶಾಸ್ತ್ರಿಗಳ 'ಮಹಾತ್ಮಾ ಬಸವೇಶ್ವರ' ನಾಟಕಗಳು ವೃತ್ತಿ ರಂಗಭೂಮಿಯಲ್ಲಿ ಹೆಸರುಮಾಡಿದವು.

ಎಪ್ಪತ್ತರ ದಶಕದಿಂದೀಚೆಗೆ ಹವ್ಯಾಸಿ ವಲಯದಲ್ಲಿ ಬಸವಣ್ಣನನ್ನು ಕುರಿತು ಹಲವು ಮಹತ್ವದ ನಾಟಕಗಳು ಬಂದವು. ಇತಿಹಾಸದ ಘಟನೆಗಳ ಪುನರ್ ವ್ಯಾಖ್ಯಾನ ನಡೆದಂತೆ ಮಾರ್ಕ್ಸ್, ಲೋಹಿಯಾ, ಗಾಂಧಿ ಇವರ ಚಿಂತನೆಗಳ ಗಂಭೀರ ಅಧ್ಯಯನ ನಡೆದಂತೆ ಶೂದ್ರಪರ ಧೋರಣೆ ಗಟ್ಟಿಗೊಂಡಂತೆ, ಜಗತ್ತಿನ ಇತರ ಕ್ರಾಂತಿಗಳ ಸ್ವರೂಪ ಹೆಚ್ಚು ಅರ್ಥವಾದಂತೆ, ಮಾನವೀಯತೆಯ ಹುಡುಕಾಟ ಹೆಚ್ಚಾದಂತೆ ಬಸವಣ್ಣ ಹೊಸ ಹೊಸದಾಗಿ ಕಾಣಲಾರಂಭಿಸಿದ. ಹೊಸ ತತ್ತ್ವ ಸಿದ್ಧಾಂತಗಳ ಬೆಳಕಿನಲ್ಲಿ ಬಸವಣ್ಣನನ್ನು ಚಿತ್ರಿಸುವ ಅನಿವಾರ್ಯದ ಪ್ರವೃತ್ತಿ ರೂಢಿಗೆ ಬಂದಿತು. ಎಷ್ಟು ಬರೆದರೂ ತೀರದ, ಎಷ್ಟು ಹೇಳಿದರೂ ಮುಗಿಯದ, ಎಷ್ಟು ವಿಸ್ತರಿಸಿದರೂ ಪೂರ್ಣಗೊಳ್ಳದ ಬಸವಣ್ಣನ ಕ್ರಾಂತಿಯ ವಿಷಯ ಮತ್ತೆ ಮತ್ತೆ ಸೃಜನಶೀಲ ಸಾಹಿತ್ಯಕ್ಕೆ ವಸ್ತುವಾಯಿತು.

ಲಂಕೇಶರ 'ಸಂಕ್ರಾಂತಿ' (೧೯೭೩) ಅಸ್ಪೃಶ್ಯರ ಕೇರಿಯ ಮೂಲಕ ಕಲ್ಯಾಣಕ್ರಾಂತಿಯನ್ನು ಅರ್ಥೈಸುವ ನಾಟಕವಾಗಿದೆ. 'ಸಂಕ್ರಾಂತಿ' ಒಂದು ಸಂಕೇತ. ಸಂಕ್ರಾಂತಿಯಂದು ಬಸವಣ್ಣ, ಶರಣರಾಗುವವರಿಂದ ಪ್ರತಿಜ್ಞೆ ಮಾಡಿಸುವವನಿರುತ್ತಾನೆ. ಹಳೆಯದು ಕಳಚಿ ಹೊಸದು ಆಗಮಿಸುವ ಸಂಧಿಕಾಲವೇ 'ಸಂಕ್ರಾಂತಿ'. ಬಸವಣ್ಣನ ಕಾಲ ಅಂಥ 'ಸಂಕ್ರಾಂತಿ'ಯ ಕಾಲ. ಅಸ್ಪೃಶ್ಯರು ಬಸವಣ್ಣನ ವ್ಯಕ್ತಿತ್ವದ ಪ್ರಭಾವಕ್ಕೆ ಒಳಗಾಗಿ ಕ್ರಾಂತಿಯಲ್ಲಿ ಪಾಲ್ಗೊಳ್ಳುವ ಸಂದರ್ಭವನ್ನು ಉಚಿತ ರೀತಿಯಲ್ಲಿ ಕಲ್ಪಿಸಲಾಗಿದೆ. ಶೂದ್ರರ ಪರಿವರ್ತನೆ ಸರಳರೇಖೆಯಲ್ಲಿ ನಡೆಯುವಂಥದಲ್ಲ. ರಕ್ತಗತವಾಗಿ ಬಂದಿರುವ ಚಟಗಳನ್ನು ಕೀಳರಿಮೆಯನ್ನು ಒಮ್ಮೆಲೇ ಬಿಟ್ಟುಬಿಡು ವುದು ಸಾಧ್ಯವಾದುದಲ್ಲ. ಈ ವಾಸ್ತವ ಸಂಗತಿಯನ್ನು ಸಂಕ್ರಾಂತಿಯಲ್ಲಿ ಪರಿಣಾಮಕಾರಿಯಾಗಿ ಚಿತ್ರಿಸಲಾಗಿದೆ. ಕಲಿತ ಪಾತ್ರಗಳಾದ ಬ್ರಾಹ್ಮಣರ ಹುಡುಗಿ ಉಷಾ ಮತ್ತು ಶೂದ್ರರ ಹುಡುಗ ರುದ್ರ, ಇವರಿಬ್ಬರ ಮಧ್ಯೆ ಬೆಳೆಯುವ ಪ್ರಣಯ, ಮುಗ್ಧತೆ ಹುಡುಗಾಟಿಕೆಗಳ ನಡುವೆ ಅದು ಅರಳುವ ಪರಿ, ಇವನ್ನು ಲವಲವಿಕೆಯಿಂದ ದೃಶ್ಯೀಕರಿಸಲಾಗಿದೆ. ಅವರಿಬ್ಬರ ಪ್ರಣಯೋನ್ಮಾದದ ಮಿಲನ ಒಂದು ಸ್ತರದಲ್ಲಿ ಅತ್ಯಂತ ಸಹಜವೆನಿಸಿದರೆ ಮುಂದೆ ಅದೇ ದೊಡ್ಡ ಗಂಡಾಂತರಕ್ಕೆ ಕಾರಣವಾಗುತ್ತದೆ. ಮೇಲ್ಜಾತಿಯವರು ಇದು ಪರಸ್ಪರ ಒಪ್ಪಿಗೆಯ ಮಿಲನವಲ್ಲ, ಅತ್ಯಾಚಾರವೆಂದು ಗುಲ್ಲೆಬ್ಬಿಸುತ್ತಾರೆ. ಉಷಾ ಸ್ವಇಚ್ಛೆಯಿಂದ ಕೇರಿ ಸೇರಿದ್ದಾಳೆ. ಆದರೆ ಕೊನೆಯಲ್ಲಿ ನಡೆಯುವ ವಿಚಾರಣೆಯ ಸಂದರ್ಭದಲ್ಲಿ ಉಷಾಳ ಅಭಿಪ್ರಾಯ ವಿಚಿತ್ರವೆನಿಸುತ್ತದೆ. ರುದ್ರ ತನ್ನನ್ನು ಬಲಾತ್ಕಾರ ಮಾಡಿದ್ದಾನೆಂದು ಹೇಳಿ ಅವನಿಗೆ ಮರಣದಂಡನೆ ವಿಧಿಸಲು ಕಾರಣಳಾಗುತ್ತಾಳೆ. ಅವಳು ಹಾಗೆ ಹೇಳಲು ಕಾರಣ – ಅವಳು ರುದ್ರನಲ್ಲಿಯ ಶೂದ್ರತ್ವಕ್ಕೆ ಆಕರ್ಷಿತಳಾಗಿ ಅವನನ್ನು ಪ್ರೀತಿಸಿರುತ್ತಾಳೆ. ಶೂದ್ರತ್ವವನ್ನು ಶರಣತ್ವ ಆವರಿಸಿರುವುದು ಅರಿವಿಗೆ ಬಂದಾಗ ಅವಳಿಗೆ ನಿರಾಶೆಯಾಗುತ್ತದೆ. ಈ ಅಸಹಜವೆನಿಸುವ ಈ ನಾಟಕೀಯ ತಿರುವು ಗೊಂದಲಕ್ಕೆ ಕಾರಣವಾಗುತ್ತದೆ. ಬಸವ ಬಿಜ್ಜಳರು ಆತ್ಮೀಯರು. ಅವರ ನಡುವೆ ತರ್ಕಬದ್ಧವಾದ ಚರ್ಚೆ ನಡೆಯುತ್ತದೆ. ಬಸವಣ್ಣ ಕನಸುಗಾರನಾಗಿ, ಬಿಜ್ಜಳ ಅಸಹಾಯಕರಾಗಿ ಕಾಣುತ್ತಾರೆ. ಕ್ರಾಂತಿ ಸಂದರ್ಭದ ಸಾಮಾಜಿಕ ಪರಿವರ್ತನೆಯ ಎಳೆಗಳನ್ನು ಲಂಕೇಶರು ಸ್ಪಷ್ಟವಾಗಿ ಗುರುತಿಸುತ್ತಾರೆ. ಶೂದ್ರರು ಕೀಳರಿಮೆ ಬಿಟ್ಟು ಧೈರ್ಯದಿಂದ ವ್ಯವಹರಿಸುವ ಚಿತ್ರಣ ನೀಡುತ್ತಾರೆ. ವ್ಯಂಗ್ಯ, ಗಟ್ಟಿತನ, ಅರ್ಥವಂತಿಕೆ ಹಾಸ್ಯಗಳಿಂದ ಕೂಡಿದ ಸಂಭಾಷಣೆ, ಪ್ರಮಾಣಬದ್ಧ ದೃಶ್ಯ ಸಂಯೋಜನೆ, ಪ್ರತಿಭಾವಂತ ನಟರಿಗೆ ಆಹ್ವಾನ, ಇವೆಲ್ಲ ಕಾರಣಗಳಿಂದಾಗಿ 'ಸಂಕ್ರಾಂತಿ' ಹವ್ಯಾಸಿ ರಂಗಭೂಮಿಯ ಮಹತ್ವದ ಪ್ರಯೋಗವೆನಿಸಿತು.

ಎಂಭತ್ತರ ದಶಕದಲ್ಲಿ ಭರ್ಜರಿ ರಂಗಪ್ರಯೋಗದ ಮೂಲಕ ಹೆಸರು ಮಾಡಿದ 'ಮಹಾಚೈತ್ರ' ಎಚ್.ಎಸ್. ಶಿವಪ್ರಕಾಶರ ನಾಟಕ. ದಟ್ಟವಾದ ಚಾರಿತ್ರಿಕ ಪ್ರಜ್ಞೆಯನ್ನಿಟ್ಟುಕೊಂಡು ಹನ್ನೆರಡನೆಯ ಶತಮಾನದ ಆ ಸಂದರ್ಭವನ್ನು ವರ್ತಮಾನದ ಬೆಳಕಿನಲ್ಲಿ ವ್ಯಾಖ್ಯಾನಿಸುವ ಪ್ರಯತ್ನ ಈ ನಾಟಕದಲ್ಲಿದೆ. ಲೇಖಕರು ತಮ್ಮ ಉದ್ದೇಶವನ್ನು ಮುಂದೆ ಹೆಜ್ಜೆ ಇಡುವಾಗಲೆಲ್ಲ ಹಿಂದಿನದನ್ನು ತಡವಿ ನೋಡಿ ಅವನ್ನು ಇಂದಿನ ಹಾಗೂ ಮುಂದಿನ ಆಶೋತ್ತರಗಳ ಬೆಳಕಿನಲ್ಲಿ ಹೊಸ ಅರ್ಥಗಳಿಗೆ ಒಗ್ಗಿಸಿಕೊಂಡು ಮುನ್ನಡೆಯಬೇಕಾಗುತ್ತದೆ. ವರ್ತಮಾನದ ವಿಶಿಷ್ಟ ಚೌಕಟ್ಟಿನಲ್ಲಿ ಹಿಂದಿನದನ್ನು ತಂದಿಡುವಾಗ ಹಿಂದಿನ ವೈಶಿಷ್ಟ್ಯಗಳನ್ನು ಮರೆಯಲಾಗುವುದಿಲ್ಲ. ಹಾಗೆ ಮಾಡಿದಾಗ ಚರಿತ್ರೆಯನ್ನೇ ನಿರಾಕರಿಸಿದಂತೆ ಎಂದು ಸ್ಪಷ್ಟಪಡಿಸಿದ್ದಾರೆ. ಮಹಾಚೈತ್ರದ ವಸ್ತು ಬಸವಣ್ಣನ ನಂತರದ ಕತೆ. ಬಸವಣ್ಣ ನೇರವಾಗಿ ನಾಟಕದಲ್ಲಿ ಬರುವುದಿಲ್ಲ. ಆದರೆ ಕೃತಿಯೆಲ್ಲ ಅವನ ಸುತ್ತ ತಿರುಗುತ್ತದೆ. ನಾಟಕದ ತುಂಬ ಅವನ ವ್ಯಕ್ತಿತ್ವದ ಬೆಳಕು ಹರಿದಾಡುತ್ತದೆ. ಬಸವಣ್ಣ ಖಿನ್ನಮನಸ್ಕನಾಗಿ ಕಲ್ಯಾಣ ಬಿಟ್ಟುಹೋಗಿದ್ದಾನೆ. ನಗರದಲ್ಲಿ ಅಲ್ಲೋಲ ಕಲ್ಲೋಲ. ಶರಣ ಮೇಲೆ ಸೇಡು ತೀರಿಸಿಕೊಳ್ಳುವ ಘಟನೆಗಳು ನಡೆದಿವೆ. ಆಗ ಉಳಿದಿರುವ ಶರಣರು ಏನು ಮಾಡಬೇಕು? ಮಹಾಮನೆಯಲ್ಲಿ ಸೇರಿ

ಗಂಭೀರವಾಗಿ ಚರ್ಚಿಸುತ್ತಾರೆ. ಹಡಪದ ಅಪ್ಪಣ್ಣ, ನಮ್ಮ ರಕ್ಷಣೆಗಾಗಿ ನಾವು ಆಯುಧಪಾಣಿಗಳಾಗಬೇಕು ಎಂದಾಗ ಚೆನ್ನಬಸವಣ್ಣ ಅದಕ್ಕೆ ಒಪ್ಪುವುದಿಲ್ಲ. ಅಹಿಂಸೆ ನಮ್ಮ ಪರಮಧರ್ಮ. ಹಿಂಸೆ ಬಸವೋಕ್ತಿಯ ಉಲ್ಲಂಘನೆ ಎನ್ನುತ್ತಾನೆ. ಆಗ ಮಾಚಿದೇವ ನಮ್ಮನ್ನು ನಂಬಿದವರ ರಕ್ಷಣೆ ಮಾಡಬೇಕಾದುದು ನಮ್ಮ ಕರ್ತವ್ಯ. ನಾವು ಬಿಟ್ಟಿ ಆಳುಗಳಲ್ಲ. ಮಹಾಮನೆಯನ್ನು ಕಟ್ಟಿದವರು ನಾವು ಎಂದು ಮುಂತಾಗಿ ಮಾತಾಡುತ್ತಾನೆ. ಭಂಡಜಂಗಮರು ಮೊದಲು ಬಸವಣ್ಣನ ಪರವಾಗಿದ್ದವರು ಈಗ ಬಸವನಿಂದಕರಾಗಿದ್ದಾರೆ. ಮಹಾಮನೆಯಲ್ಲಿ ಸಮೃದ್ಧ ತುಪ್ಪದೂಟ ದೊರೆಯುತ್ತಿದ್ದಾಗ ಬಸವಣ್ಣನನ್ನು ಹೊಗಳುತ್ತಿದ್ದವರು ಈಗ ಪುಂಡಿಪಲ್ಲೆ ರೊಟ್ಟಿ ನೀಡಿದಾಗ ಅವರ ಬಸವಾಭಿಮಾನ ಕರಗಿ ಹೋಗುತ್ತದೆ. ತಮ್ಮ ಅಭಿಪ್ರಾಯವನ್ನು ಸಂಪೂರ್ಣ ಬದಲಾಯಿಸಿ ಬಸವಣ್ಣನ ಸುಧಾರಣೆಗಳನ್ನು ಹಗುರವಾಗಿ ಟೀಕಿಸುತ್ತ ತಿರುಗಾಡುವ ಸ್ವಾರ್ಥಿಗಳವರಾಗಿದ್ದಾರೆ. ಮಹಾಮನೆಯಲ್ಲಿ ಉಳಿದಿರುವ ನೀಲಾಂಬಿಕೆ ದುಃಖಿಯಲ್ಲ; ನಿರ್ಲಿಪ್ತೆ. ಅವಳಿಗೆ ಬಸವಣ್ಣನ ಅಂತ್ಯದ ಸುದ್ದಿಯನ್ನು ಶರಣರು ತಿಳಿಸುತ್ತಾರೆ. ಅತ್ಯಂತ ಸೂಕ್ಷ್ಮಮತಿ ಭಾವುಕ ಕೋಮಲ ಮನಸ್ಸಿನ ಬಸವಣ್ಣ ತನಗಾದ ಆಘಾತವನ್ನು ತಾಳಿಕೊಳ್ಳಲಾರದೆ ಮೌನಿಯಾಗಿ ಧ್ಯಾನಸ್ಥನಾಗಿ ಏಕಾಂತವಾಸಿಯಾಗಿ ರಾತ್ರಿ ನದಿಯಲ್ಲಿ ಹಾರಿಕೊಂಡು ಪ್ರಾಣಕೊಟ್ಟದ್ದನ್ನು ವಿಷಾದದಿಂದ ವಿವರಿಸುತ್ತಾರೆ. ಬಿಜ್ಜಳ ನೀಲಾಂಬಿಕೆಗೆ ಸಾಂತ್ವನ ಹೇಳುವಾಗ, ಅವಳು, ''ನೀವಲ್ಲದೆ ಯಾರು ಚಕ್ರವರ್ತಿಯಾಗಿದ್ದರೂ ಬಸವರಸರ ಕಥೆ ನೀರಿನಲ್ಲಿ ಮುಗಿಯುತ್ತಿತ್ತು'' ಎನ್ನುತ್ತಾಳೆ.

ಗಿರೀಶ ಕಾರ್ನಾಡರ ತಲೆದಂಡ (೧೯೯೦) ಮಾಮೂಲಿ ಬಸವಕತೆಯನ್ನು ಮುರಿದು ಕಟ್ಟಿದ ಹೊಸಸೃಷ್ಟಿ, ಬಸವಣ್ಣನ ವ್ಯಕ್ತಿತ್ವದ ಪ್ರಭಾವ ಎಲ್ಲ ವರ್ಗದವರ ಮೇಲೆ ಉಂಟಾಗಿದೆ. ಜಗದೇವನೆಂಬ ಬ್ರಾಹ್ಮಣ ಯುವಕ ಬಸವಣ್ಣನ ನಿಷ್ಠಾವಂತ ಹಿಂಬಾಲಕ. ಮಧುವರಸನೂ ಅಷ್ಟೇ. ಬಸವ ಬಿಜ್ಜಳರ ಸಂಬಂಧ ತುಂಬಾ ಆತ್ಮೀಯವಾದುದು, ಕೌಟುಂಬಿಕವಾದುದು. ಬಿಜ್ಜಳ, ರಾಜನ ಆವರಣ ಕಳಚಿದ ಸಹಜ ಮನುಷ್ಯನಂತೆ ಕಾಣುತ್ತಾನೆ. ರಾಜಕೀಯದ ಆತಂಕ ಒತ್ತಡಗಳ ಮಧ್ಯೆಯೂ ತನ್ನ ಹುಂಬತನವನ್ನು ಮುಗ್ಧತೆಯನ್ನು ನಿರ್ಭಿಡೆಯ ಧೋರಣೆ ಯನ್ನು ತೋರಿಸಿಕೊಳ್ಳುತ್ತಾನೆ. ಮೂಲತಃ ಕ್ಷೌರಿಕ ಜಾತಿಯವನಾದ ಬಿಜ್ಜಳನಲ್ಲಿ ಕೀಳರಿಮೆಯಿದೆ. ಆ ಕೀಳರಿಮೆ ತೊಡೆದುಹಾಕಿ ಕ್ಷತ್ರಿಯನಾಗುವ ಹಂಬಲ ಅವನಿಗೆ. ಅದಕ್ಕೆ ಬಸಣ್ಣನ ಬೆಂಬಲವಿದೆ. ಬಸವಣ್ಣ ಊರಲ್ಲಿಲ್ಲದಾಗ ಚಾಡಿಕೋರರ ಮಾತು ಕೇಳಿ ಬಿಜ್ಜಳನ ಮಗ ಸೋವಿದೇವ ಭಂಡಾರದ ಲೆಕ್ಕತಪಾಸಣೆಗೆ ಕೈಹಾಕುತ್ತಾನೆ. ಲೆಕ್ಕ ಸರಿ ಇರುತ್ತದೆ. ಇದು ಬಸವಣ್ಣನ ಪವಾಡ ಎಂದು ಜನ ನಿರ್ಧರಿಸುತ್ತಾರೆ. 'ನಾನು ಪವಾಡಮಾಡಿಲ್ಲ' ಎಂದು ಬಸವಣ್ಣ ಕೂಗಿ ಹೇಳಿದರೂ ಜನ ನಂಬುವುದಿಲ್ಲ. ಒಬ್ಬ ಪ್ರಾಮಾಣಿಕ ವ್ಯಕ್ತಿಯ ಸುತ್ತ ಪವಾಡಗಳು ಹೇಗೆ ಬೆಳೆಯುತ್ತವೆ ಮತ್ತು ಜನ ಸಾಮಾನ್ಯರು ಪವಾಡಗಳನ್ನೇ ಇಷ್ಟಪಡುವರೆಂಬುದನ್ನಿಲ್ಲಿ ಕಂಡುಕೊಳ್ಳಬಹುದು. ಬಸವಣ್ಣನದು ದಯಾಪರವಾದ ಬಂಧುತ್ವದ ನಿಲವು. ಒಂದೂರಿನಲ್ಲಿ ಶರಣರಿಗೂ ಜೈನರಿಗೂ ಜಗಳವಾದ ಸುದ್ದಿ ತಿಳಿದು ಬಹಳಷ್ಟು ನೊಂದುಕೊಳ್ಳುತ್ತಾನೆ. ದೇವಾಲಯಗಳ ಧರ್ಮಾಂಧರು ನಾಶಮಾಡುವುದನ್ನು 'ಕಲ್ಲುಮಣ್ಣುಗಚ್ಚಿನ ದೇವಾಲಯದ ಹೆಸರಿನಲ್ಲಿ ಹಿಂಸೆ ನಡೆಯುವುದಂತೂ ಮೂರ್ಖತನದ ಪರಮಾವಧಿ' ಎಂದು ಖಂಡಿಸುತ್ತಾನೆ. ಮಧುವರಸನ ಮಗಳು ಕಲಾವತಿ ಮತ್ತು ಹರಳಯ್ಯನ ಮಗ ಶೀಲನಿಗೆ ಲಗ್ನ ನಿಶ್ಚಯವಾಗಿರುವುದು ವಧು-ವರರ ಒಪ್ಪಿಗೆಯಿಂದ; ಒತ್ತಾಯದಿಂದ ಅಲ್ಲ. ಮುಖ್ಯವಾಗಿ ಮಧುವರಸನ ಒತ್ತಾಯದಿಂದ. ಹೊಸದಾಗಿ ಶರಣಧರ್ಮಕ್ಕೆ ಸೇರಿದ ಮಧುವರಸ ಶರಣ ತತ್ತ್ವಗಳ ಆಚರಣೆಗೆ ತೀವ್ರವಾಗಿ ಹಂಬಲಿಸುತ್ತ ಮಗಳನ್ನು ಅಂತ್ಯಜನಿಗೆ (ಶರಣನಿಗೆ) ಕೊಡಲು ಮುಂದಾಗುತ್ತಾನೆ. ಈ ನಿರ್ಧಾರ ಕೇಳಿ ಬಸವಣ್ಣನಿಗೆ ಆಶ್ಚರ್ಯ, ಆಘಾತ, ತನ್ನ ಕನಸು ನನಸಾಗುವುದಕ್ಕಾಗಿ ಸಂತೋಷಪಡುತ್ತಾನೆ. ಕೂಡಲೇ ಗಾಬರಿಗೊಳ್ಳುತ್ತಾನೆ. ಕಾಲ ಪಕ್ವವಾಗಿಲ್ಲ. ನಾವು ತಕ್ಕ ತಯಾರಿ ಮಾಡಿಕೊಂಡಿಲ್ಲ. ಸದ್ಯಕ್ಕೆ ಮದುವೆ ಬೇಡವೆಂದು ವಾದಿಸುತ್ತಾನೆ. ಇಲ್ಲಿ ಬಸವಣ್ಣ ಕನಸುಗಾರನಂತೆ ವರ್ತಿಸದೆ ವ್ಯಾವಹಾರಿಕ ಜಾಣ್ಮೆಯನ್ನು ವ್ಯಕ್ತಪಡಿಸುವನು. ಬಿಜ್ಜಳ ತಾನಾಗಿಯೇ ಬಸವಣ್ಣನ ಮನೆಗೆ ಬಂದು ಚರ್ಚಿಸುತ್ತಾನೆ. ಕೊನೆಯಲ್ಲಿ ಬಿಜ್ಜಳನಿಗೆ ಅವನ ಮಗ ಸೋವಿದೇವನಿಂದ ಗೃಹಬಂಧನದ ಶಿಕ್ಷೆ ದೊರೆತಾಗ ಅವನು ತೀರಾ ಅಸಹಾಯಕನಾಗಿ ದೀನನಾಗುತ್ತಾನೆ. ಮೇಲ್ನೋಟಕ್ಕೆ ಅವನು ಬ್ರಾಹ್ಮಣ-ಶೂದ್ರರ ಮದುವೆಯನ್ನು ತಿರಸ್ಕರಿಸಿದರೂ ಅಂತರಂಗದಲ್ಲಿ ಅದನ್ನು ಮೆಚ್ಚುತ್ತಾನೆ. ಬಸವಣ್ಣನೊಂದಿಗೆ ಮಾತಿಗೆ ಮೀರಿದ ಸ್ನೇಹ ಅವನದು. ಬಸವಣ್ಣನ ಕತೆಯನ್ನು, ಬಿಜ್ಜಳನ ಜೀವನವನ್ನು, ಅರಮನೆಯ ಅಂತರಂಗವನ್ನು, ರಾಜಕೀಯ ಏಳು ಬೀಳುಗಳನ್ನು ಹೊಸ ಪರಿಭಾಷೆಯಲ್ಲಿ ಹಿಡಿದಿಡಲು 'ತಲೆದಂಡ' ಪ್ರಯತ್ನಿಸಿದೆ. ಶರಣರಿಂದ ಬಿಜ್ಜಳನ ಕೊಲೆ ನಡೆಯುವ ಪ್ರಸಂಗ ದುಡುಕು ಮತ್ತು ಅಸ್ಪಷ್ಟತೆಯ ದೋಷಕ್ಕೆ ಗುರಿಯಾಗಿದೆ.

'ಕೆಟ್ಟಿತ್ತು ಕಲ್ಯಾಣ' (೧೯೯೫) ಡಾ. ಎಂ.ಎಂ. ಕಲಬುರ್ಗಿಯವರ ನಾಟಕ. ಸಂಶೋಧಕ ಕಲಬುರ್ಗಿಯವರು ತಮ್ಮ ಊಹಾತ್ಮಕ ಸಂಶೋಧನೆಯ ಹೊಳಹುಗಳನ್ನು ಇಲ್ಲಿ ಒತ್ತಾಯದಿಂದ ಪಾತ್ರಗಳ ಮೇಲೆ ಸನ್ನಿವೇಶಗಳ ಮೇಲೆ ಹೇರಿದ್ದಾರೆ ಅನಿಸುತ್ತದೆ. ಸಮಕಾಲೀನ ಸಂಗತಿಗಳ ನೇರ ನೆರಳುಗಳು ನಾಟಕದ ತುಂಬ ವ್ಯಾಪಿಸಿರುವುದರಿಂದ ಒಟ್ಟಾರೆ ನಿರೂಪಣೆ ತೀರಾ ವಾಚ್ಯವೆನಿಸುತ್ತದೆ. ಬಸವಣ್ಣನ ಪವಾಡಗಳನ್ನು ವೈಭವೀಕರಿಸುವ ಭರದಲ್ಲಿ ಅವುಗಳನ್ನು ಹೊಸದಾಗಿ ಅರ್ಥೈಸುವ ಭರದಲ್ಲಿ ಅಪಕ್ವ ಮತ್ತು ಅಪಾಯಕಾರಿ ವಿಚಾರಗಳನ್ನು ತುರುಕಲಾಗಿದೆ. ಭಂಡಾರ ರಕ್ಷಕನಾದ ಬಸವಣ್ಣ 'ರಾಜ್ಯಭಂಡಾರ ರಾಜನದಲ್ಲ; ಪ್ರಜೆಗಳಾದ ನಿಮ್ಮದು. ಇದನ್ನು ನೀವು ಬೆಳೆಸಿದ್ದೀರಿ' ಎಂದು ಹೇಳುತ್ತಾನೆ. ಗೋಗ್ರಹಣದ ಸಂದರ್ಭದಲ್ಲಿ 'ಹಾಲನ್ನು ನಾವು ಉಂಡರೇನು? ಅವರು ಉಂಡರೇನು?' ಎಂದು ಸಮಾಧಾನ ಹೇಳುತ್ತಾನೆ. ಬಸವ ನೀಲಾಂಬಿಕೆಯರ ವಿವಾಹ ಹಾಸ್ಯಾಸ್ಪದವೆನಿಸುವಂತಿದೆ.

ಇತರ ಶರಣರನ್ನು ಕುರಿತು ಬಹಳಷ್ಟು ನಾಟಕಗಳು ಬೆಳಕು ಕಂಡಿವೆ. ಅವುಗಳ ಸಂಗ್ರಹ ಮತ್ತು ಅಧ್ಯಯನ ನಡೆಯಬೇಕಿದೆ. ಉರಿಲಿಂಗಪೆದ್ದಿಯನ್ನು ಕುರಿತು ಶಿವಮೂರ್ತಿ ಮುರುಘರಾಜೇಂದ್ರ ಸ್ವಾಮಿಗಳ 'ಬೆಳಕಿನೆಡೆಗೆ', ತರಳಬಾಳು ಶಿವಕುಮಾರ ಸ್ವಾಮಿಗಳವರ 'ಮರಣವೇ ಮಹಾನವಮಿ', ಜಚನಿ ಅವರ 'ಆಯ್ದಕ್ಕಿ ಮಾರಯ್ಯ', ಪುಟ್ಟರಾಜ ಗವಾಯಿಗಳ 'ಶಿವಯೋಗಿ ಸಿದ್ಧರಾಮ', 'ಅಕ್ಕಮಹಾದೇವಿ', ನಲವಡಿ ಶ್ರೀಕಂಠಶಾಸ್ತ್ರಿಗಳ 'ಚೆನ್ನಬಸವಣ್ಣ', 'ಸಿದ್ದರಾಮೇಶ್ವರ', ಬಿ.ಎ. ಸನದಿ ಅವರ 'ನೀಲಾಂಬಿಕಾ', ಮಹಾದೇವ ಬಣಕಾರ ಅವರ 'ಕಲ್ಯಾಣಕ್ರಾಂತಿ', ಎಚ್. ತಿಪ್ಪೇರುದ್ರಸ್ವಾಮಿ ಅವರ 'ಶರಣರ ಮೂರು ನಾಟಕಗಳು' – ಈ ಮೊದಲಾದವು ಗಮನಾರ್ಹ ರಚನೆಗಳಾಗಿವೆ.

*(ಕೃಪೆ : ಶರಣತತ್ವ ಚಿಂತನ)* ○







# ಆದರ್ಶ ಶಿಕ್ಷಕ, ಸರಳ ಸಜ್ಜನಿಕೆಯ ನುಡಿಗಾರುಡಿಗ ಪಂಡಿತ ಚೆನ್ನಪ್ಪ ಎರೇಸೀಮೆ

– ಎಚ್.ಎಸ್. ಸಿದ್ಧಗಂಗಪ್ಪ
೫೪/೧, 'ಶಿವಕೃಪ', ೩ನೇ ಅಡ್ಡರಸ್ತೆ,
ಕಾವೇರಿ ಬಡಾವಣೆ, ನಾಗರಬಾವಿ ರಸ್ತೆ,
ವಿಜಯನಗರ, ಬೆಂಗಳೂರು – ೪೦.

ಯಾವುದೇ ಕ್ಷೇತ್ರವನ್ನು ತೆಗೆದುಕೊಂಡರೂ ಎರಡು ಗುಂಪಿನ ಜನರನ್ನು ಕಾಣಬಹುದು. ಕೆಲವರು ಕೀರ್ತಿಯ ಬೆನ್ನು ಹತ್ತಿದರೆ, ಮತ್ತೆ ಕೆಲವರಿಗೆ ಕೀರ್ತಿಯೇ ಬೆನ್ನತ್ತಿ ಹೋಗುತ್ತದೆ. ಪಂಡಿತ ಚೆನ್ನಪ್ಪ ಎರೇಸೀಮೆಯವರು ಎರಡನೇ ಗುಂಪಿಗೆ ಸೇರಿದವರು. ಅವರು ನಾಡಿನ ಶಿಕ್ಷಣ, ಸಾಹಿತ್ಯ ಹಾಗೂ ಪತ್ರಿಕಾ ಕ್ಷೇತ್ರದಲ್ಲಿ ಸದ್ದುಗದ್ದಲವಿಲ್ಲದೆ ಕಳೆದ ಐದು ದಶಕಗಳಿಂದ ವಿಶಿಷ್ಟ ಸೇವೆಯನ್ನು ಸಲ್ಲಿಸಿದ ಅಪರೂಪದ ವ್ಯಕ್ತಿ.

ಚೆನ್ನಪ್ಪ ಎರೇಸೀಮೆಯವರು ಹುಟ್ಟಿದ್ದು ಶಾಲಾ ದಾಖಲೆಯ ಪ್ರಕಾರ ೧೯೧೯ನೇ ಸೆಪ್ಟೆಂಬರ್ ೩ರಂದು, ಧಾರವಾಡ ಜಿಲ್ಲೆ ಹಾನಗಲ್ ತಾಲ್ಲೂಕು ಹರವಿ ಗ್ರಾಮದಲ್ಲಿ. ಹಡೆದ ಪುಣ್ಯ ಜೀವಿಗಳು ತಂದೆ ಮುದುಕಪ್ಪ, ತಾಯಿ ಸಂಗಮ್ಮ. ಅವರದು ಸಂಪ್ರದಾಯಸ್ಥ ಬಡರೈತ ಕುಟುಂಬ.



ಬಾಲಕ ಚೆನ್ನಪ್ಪ ಅವರಿಗೆ ಓದಬೇಕೆಂಬ ಆಸೆ ಸದಾ ತುಡಿಯು ತ್ತಿದ್ದರೂ, ಕಿತ್ತು ತಿನ್ನುವ ಬಡತನದಿಂದ ವ್ಯಾಸಂಗ ಸುಗಮವಾಗಿ ನಡೆಯಲಿಲ್ಲ. ಓದಲೇಬೇಕು ಎಂಬ ಛಲ ಅವರನ್ನು ಆಗಿನ ಮುಲ್ಕಿ ಪರೀಕ್ಷೆಯವರೆಗೂ ಬರುವಂತೆ ಮಾಡಿತು. ಜ್ಞಾನದ ಹಸಿವಿನ ಮುಂದೆ ಹೊಟ್ಟೆ ಹಸಿವು ತನ್ನ ತಪ್ಪನ್ನು ಒಪ್ಪಿಕೊಂಡಿತು. ಕಷ್ಟಪಟ್ಟು ಓದಿ ನೌಕರಿ ಸೇರಿಕೊಂಡು ಕುಟುಂಬವನ್ನು ಬಡತನದಿಂದ ಪಾರುಮಾಡಬೇಕೆಂಬ ಉತ್ಕಟ ಆಕಾಂಕ್ಷೆ ಅವರ ಬದುಕಿಗೆ ಶ್ರೀರಕ್ಷೆಯಾಗಿತ್ತು. ಮುಂದಿಟ್ಟ ಹೆಜ್ಜೆಯನ್ನು ಹಿಂದೆ ಸರಿಸಬಾರದೆಂಬ ದೃಢಸಂಕಲ್ಪ ಅವರನ್ನು ಓದುವಂತೆ ಮಾಡಿತು. ಆರನೇ ಕ್ಲಾಸು ಸೇರಲು ಅವರ ಮನೆಯವರಿಗೆ ಎರಡೂವರೆ ಆಣೆ ಕೊಡಲು ಸಾಧ್ಯವಾಗಲಿಲ್ಲ. ಹಣಕ್ಕಾಗಿ ಬೇರೆಯವರ ಮುಂದೆ ಕೈಚಾಚಲು ಸ್ವಾಭಿಮಾನ ಅಡ್ಡಬಂದಿತು. ಹೊಲದಲ್ಲಿ ಬೆವರು ಸುರಿಸಿ ದುಡಿದು ಹಣ ಕೂಡಿಟ್ಟುಕೊಂಡು ಓದನ್ನು ಮುಂದುವರಿಸಿದ ದಿಟ್ಟ ಹೋರಾಟಗಾರರು. ಹಿಡಿದ ಕೆಲಸವನ್ನು ಸಾಧಿಸಬೇಕೆಂಬ ಛಲ, ಆತ್ಮಸ್ಥೈರ್ಯ ಅವರ ಬದುಕಿಗೆ ದಾರಿದೀಪವಾಯಿತು.

ಮುಲ್ಕಿ ಪರೀಕ್ಷೆಯನ್ನು ಉನ್ನತ ದರ್ಜೆಯಲ್ಲಿ ಪಾಸು ಮಾಡಿದ ನಂತರ ಗಾಂವಠೀ ಶಾಲೆಯಲ್ಲಿ ಶಿಕ್ಷಕರಾಗಲು ಪ್ರಯತ್ನಿಸಿದರು. ಆದರೆ ಅವರಿಗೆ ಎಲ್ಲ ಅರ್ಹತೆಗಳಿದ್ದರೂ ವಯಸ್ಸು ಚಿಕ್ಕದು ಎಂಬ ಕಾರಣಕ್ಕಾಗಿ ಕೆಲಸ ಕೊಡಲು ನಿರಾಕರಿಸಲಾಯಿತು. ಕಾಲದ ಮಹತ್ವವನ್ನು ಅರಿತಿದ್ದ ಎರೇಸೀಮೆಯವರು ಕಾಲ ವ್ಯಯ ಮಾಡಲು ಇಷ್ಟಪಡದೆ ಮತ್ತೆ ಹಳ್ಳಿಗೆ ಹಿಂದಿರುಗಿ ಸ್ವಲ್ಪಕಾಲ ಕೃಷಿ ಕಾಯಕದಲ್ಲಿ ತಮ್ಮನ್ನು ತೊಡಗಿಸಿಕೊಂಡರು. ನಂತರ ತಿಂಗಳಿಗೆ ೯ ರೂ. ಸಂಬಳದ ಮೇಲೆ ಮಲೆನಾಡಿನ ಗಾಂವಠೀ ಶಾಲಾ ಮಾಸ್ತರನಾಗಿ ವೃತ್ತಿ ಜೀವನ ಆರಂಭಿಸಿದರು. ತಮಗೆ ದೊರೆತ ಅವಕಾಶವನ್ನು ಸಾರ್ಥಕ ರೀತಿಯಲ್ಲಿ ದುಡಿಸಿಕೊಂಡರು. ಶ್ರದ್ಧೆ, ನಿಷ್ಠೆಯಿಂದ ಕೆಲಸ ಮಾಡಿ ವಿದ್ಯಾರ್ಥಿಗಳ ಹಾಗೂ ಪೋಷಕರ ಮನಸ್ಸನ್ನು ಗೆದ್ದು ಬಹುಬೇಗ ಜನಪ್ರಿಯರಾದರು. ಮಲೆನಾಡಿನ ಸಾಮಾಜಿಕ, ಧಾರ್ಮಿಕ ಹಾಗೂ ಸಾಂಸ್ಕೃತಿಕ ಬದುಕಿನಲ್ಲಿ ಹಾಸು ಹೊಕ್ಕಾದರು. ತಮ್ಮಲ್ಲಿದ್ದ ಪ್ರತಿಭೆಯನ್ನು ತೋರಿಸಲು ಸೂಕ್ತ ವೇದಿಕೆಯನ್ನು ರೂಪಿಸಿಕೊಂಡರು. ನಾಟಕ ಬರೆದು ಆಡಿಸಿ, ಪ್ರವಚನ ಮಾಡಿ ಕಥಾ ಕಾಲಕ್ಷೇಪಗಳನ್ನು ನಡೆಸಿ ಮನೆಮಾತಾದರು.

ದಿನ ಕಳೆದಂತೆ ಚೆನ್ನಪ್ಪನವರಲ್ಲಿ ಜ್ಞಾನದಾಹ ಹೆಚ್ಚಾಗುತ್ತಲೇ ಇತ್ತು. ಓದನ್ನು ಮುಂದುವರಿಸಬೇಕೆಂಬ ಬಯಕೆ ಅವರಲ್ಲಿ ಸದಾ ಜಾಗೃತವಾಗಿತ್ತು. ತುಮಕೂರಿನಲ್ಲಿ ವಿಟಿಸಿ (ವರ್ನಾಕ್ಯುಲರ್ ಟೀಚರ್ ಸರ್ಟಿಫಿಕೇಟ್) ಕೋರ್ಸನ್ನು ಮುಗಿಸಿ ಉನ್ನತ ದರ್ಜೆಯಲ್ಲಿ ಉತ್ತೀರ್ಣರಾದರು. ಅಷ್ಟಕ್ಕೇ ಅವರು ತೃಪ್ತರಾಗಲಿಲ್ಲ. ನಂತರ ಮೈಸೂರಿಗೆ ಹೋಗಿ ಪಂಡಿತ ಪರೀಕ್ಷೆಗಾಗಿ ಶ್ರದ್ಧೆಯಿಂದ ಅಧ್ಯಯನ ಮಾಡಿ ರ್‍ಯಾಂಕನ್ನು ತಮ್ಮದಾಗಿಸಿಕೊಂಡರು. ತಮ್ಮ ಹೆಸರಿನ ಮುಂದೆ 'ಪಂಡಿತ' ಎಂದು ಸೇರಿಸಿಕೊಳ್ಳಲು ಅವರು ನಡೆಸಿದ




ಶಿಕ್ಷಣ ಹಾಗೂ ಪತ್ರಿಕಾ ಕ್ಷೇತ್ರದಲ್ಲಿ ಅನುಪಮ ಸೇವೆಸಲ್ಲಿಸಿದ ಪಂಡಿತ ಚೆನ್ನಪ್ಪ ಎರೇಸೀಮೆ ಅವರಿಗೆ ಪರಮಪೂಜ್ಯ ಶ್ರೀ ಶ್ರೀಗಳವರಿಂದ ಸನ್ಮಾನ

ಹೋರಾಟ ಅವರ ಬದುಕಿನ ಮೈಲಿಗಲ್ಲು. ಉಭಯ ಭಾಷಾ ವಿದ್ವಾಂಸರಾದ ಚೆನ್ನಪ್ಪ ಎರೇಸೀಮೆಯವರು ಪ್ರೌಢಶಾಲೆಯಲ್ಲಿ ಕನ್ನಡ ಶಿಕ್ಷಕರಾಗಿ, ನಂತರ ಶಿಕ್ಷಕ ತರಬೇತಿ ಕಾಲೇಜಿನಲ್ಲಿ ಭಾಷಾ ಸಾಹಿತ್ಯದ ಶಿಕ್ಷಕರಾಗಿ ಮೂರು ದಶಕಗಳಿಗೂ ಹೆಚ್ಚು ಕಾಲ ಅನುಪಮ ಸೇವೆ ಸಲ್ಲಿಸಿ ೧೯೭೫ರಲ್ಲಿ ವೃತ್ತಿಯಿಂದ ನಿವೃತ್ತರಾದರು.

ಉತ್ತಮ ಹಾಗೂ ಆದರ್ಶ ಶಿಕ್ಷಕರೆಂಬ ಹೆಗ್ಗಳಿಕೆಗೆ ಪಾತ್ರರಾದ ಪಂಡಿತ ಚೆನ್ನಪ್ಪ ಎರೇಸೀಮೆಯವರು ಸಹಸ್ರಾರು ವಿದ್ಯಾರ್ಥಿಗಳ ಪಾಲಿಗೆ 'ಪ್ರೀತಿಯ ಮೇಷ್ಟ'ರಾಗಿದ್ದರು. ತಮ್ಮಲ್ಲಿದ್ದ ಪ್ರತಿಭೆಯನ್ನು ಧಾರೆ ಎರೆದರು. ವಿದ್ಯಾರ್ಥಿಗಳಿಗೆ ಪಂಡಿತ ಚೆನ್ನಪ್ಪ ಎರೇಸೀಮೆಯವರ ಶಿಷ್ಯರೆಂದು ಹೇಳಿಕೊಳ್ಳಲು ತುಂಬಾ ಹಿಗ್ಗು, ಆದರ್ಶಗಳ ಮುಂಬೆಳಕಿನಲ್ಲಿ ಹತ್ತು ಜನ ಮೆಚ್ಚುವಂತೆ, ಒಪ್ಪುವಂತೆ ಇತರರಿಗೆ ಸ್ವಲ್ಪವೂ ನೋವಾಗದಂತೆ ಜೀವನ ನಡೆಸಿದ ಸಾತ್ವಿಕ ವ್ಯಕ್ತಿತ್ವ ಇವರದು.

### ಶಿಕ್ಷಣ ಇಲಾಖೆಯ ವಿವಿಧ ಸಮಿತಿಗಳಲ್ಲಿ

ಪಂಡಿತ ಚೆನ್ನಪ್ಪ ಎರೇಸೀಮೆಯವರ ವಿದ್ವತ್ತನ್ನು ಗಮನಿಸಿದ ಸರ್ಕಾರ ಅನೇಕ ಸಮಿತಿಗಳಲ್ಲಿ ಸ್ಥಾನವನ್ನು ಕಲ್ಪಿಸಿಕೊಟ್ಟು ಅವರ ಪಾಂಡಿತ್ಯವನ್ನು ಬಳಸಿಕೊಂಡಿತು. ಕರ್ನಾಟಕ ರಾಜ್ಯ ಪ್ರಾಥಮಿಕ ಶಾಲಾ ಪಾಠಪಟ್ಟಿ ಸಮಿತಿ, ಕರ್ನಾಟಕ ರಾಜ್ಯದ ಪ್ರೌಢಶಾಲಾ ಪಠ್ಯಪುಸ್ತಕ ಸಮಿತಿ, ಕರ್ನಾಟಕ ರಾಜ್ಯ ಪಿ.ಯು.ಸಿ. ಬೋರ್ಡ್ ಪಠ್ಯಪುಸ್ತಕ ಸಮಿತಿ, ಕೇರಳ ರಾಜ್ಯ ಪಠ್ಯಪುಸ್ತಕ ಸಮಿತಿ, ಪ್ರೌಢಶಾಲಾ ಪಾಠಪಟ್ಟಿ ಸಮಿತಿ, ಭಾರತ ಸರ್ಕಾರದ ಪಠ್ಯಪುಸ್ತಕ ಸಮಿತಿಗಳು – ಹೀಗೆ ಹಲವಾರು ಸಮಿತಿಗಳಲ್ಲಿ ಇವರ ವಿದ್ವತ್ತನ್ನು ದುಡಿಸಿ ಕೊಳ್ಳಲಾಗಿದೆ.

### ಸಾಹಿತ್ಯ ಕ್ಷೇತ್ರ

ಎರೇಸೀಮೆಯವರು ಶಿಕ್ಷಣ ಕ್ಷೇತ್ರದಲ್ಲಿ ಹೆಸರು ಮಾಡಿದಂತೆ ಸಾಹಿತ್ಯ ಕ್ಷೇತ್ರದಲ್ಲೂ ಅಮೂಲ್ಯ ಕೃತಿಗಳನ್ನು ನೀಡುವುದರ ಮೂಲಕ ವಿಶಿಷ್ಟಸೇವೆಯನ್ನು ಸಲ್ಲಿಸಿದ್ದಾರೆ. ಹೊಸಗನ್ನಡ ಸರಳ ವ್ಯಾಕರಣ ಪಾಠಗಳು, ಅರವಿಂದ, ಬಸವಣ್ಣನವರ ಕ್ರಾಂತಿ ಕಹಳೆ, ಬಸವಣ್ಣನವರ ಪಂಚಪರುಷ, ಅಜಗಣ್ಣ-ಮುಕ್ತಾಯಕ್ಕ, ಸಿದ್ಧರಾಮನ ಲಿಂಗತಪಸ್ಸು, ಸಿದ್ಧಗಂಗಾ ಕ್ಷೇತ್ರದ ಇತಿಹಾಸ-ಪರಂಪರೆ, ಚನ್ನಮಲ್ಲಿಕಾರ್ಜುನ, ಉದ್ದಾನ ಶಿವಯೋಗಿ, ರಾಜಶೇಖರ ವಿಳಾಸವೂ ಸೇರಿದಂತೆ ಅನೇಕ ಮೌಲಿಕ ಕೃತಿಗಳನ್ನು ನೀಡಿ ಸಾಹಿತ್ಯ ಕ್ಷೇತ್ರವನ್ನು ಶ್ರೀಮಂತಗೊಳಿಸಿದ್ದಾರೆ. ನಾಡಿನ ಹಿರಿಯ ವಿದ್ವಾಂಸರಾದ ಎಚ್. ದೇವೀರಪ್ಪ, ಡಾ. ರಂ.ಶ್ರೀ. ಮುಗಳಿ, ಡಾ. ಜಿ.ಎಸ್. ಶಿವರುದ್ರಪ್ಪ, ಡಾ. ಸಿ.ಚ. ನಂದೀಮಠ, ಟಿ.ಆರ್. ಮಹಾದೇವಯ್ಯ ಅವರೊಂದಿಗೆ ಸೇರಿ ಹತ್ತಕ್ಕೂ ಹೆಚ್ಚು ಶ್ರೇಷ್ಠ, ಪ್ರೌಢ ಗ್ರಂಥಗಳನ್ನು ಸಂಪಾದಿಸಿಕೊಟ್ಟಿದ್ದಾರೆ. ಎಂಬತ್ತಕ್ಕೂ ಹೆಚ್ಚು ಮೌಲಿಕ ಲೇಖನಗಳು; ಅಭಿನಂದನಾ ಗ್ರಂಥಗಳು, ವಿಶೇಷ ಸಂಚಿಕೆಗಳು ಹಾಗೂ ನಿಯತಕಾಲಿಕೆಗಳಲ್ಲಿ ಬೆಳಕು ಕಂಡು ವಿದ್ವಾಂಸರ ಗಮನವನ್ನು ಸೆಳೆದಿವೆ. ಮಕ್ಕಳಿಗೆ ಸಂಬಂಧಿಸಿದಂತೆ ಅನೇಕ ಕೃತಿಗಳೂ ಪ್ರಕಟವಾಗಿವೆ. ಬೆಂಗಳೂರು ಆಕಾಶವಾಣಿ ಕೇಂದ್ರದಿಂದ ಅನೇಕ ಕಾರ್ಯಕ್ರಮಗಳು ಬಿತ್ತರಗೊಂಡಿವೆ.





### ಗೌರವ ಪ್ರಶಸ್ತಿಗಳು

ಪಂಡಿತ ಚೆನ್ನಪ್ಪ ಎರೇಸೀಮೆಯವರು ಶಿಕ್ಷಣ ಹಾಗೂ ಸಾಹಿತ್ಯ ಕ್ಷೇತ್ರಗಳಲ್ಲಿ ಸಲ್ಲಿಸಿದ ಅನುಪಮ ಸೇವೆಗಾಗಿ ಹಲವಾರು ಗೌರವ ಪ್ರಶಸ್ತಿಗಳು ಅವರನ್ನು ಹುಡುಕಿಕೊಂಡು ಬಂದವು. ಇದರಿಂದ ಚೆನ್ನಪ್ಪ ಅವರಿಗಿಂತ ಪ್ರಶಸ್ತಿಗಳಿಗೆ ಮಹತ್ವ ಬಂದಿತು. ಆದರ್ಶ ಶಿಕ್ಷಕ ಪ್ರಶಸ್ತಿ, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ಕೊಪ್ಪಳದಲ್ಲಿ ನಡೆದ ೬೨ನೆಯ ಅಖಿಲ ಭಾರತ ಸಾಹಿತ್ಯ ಸಮ್ಮೇಳನ, ಬೆಂಗಳೂರು ಗಾಜಿನ ಮನೆಯಲ್ಲಿ ನಡೆದ ಬಸವ ಜಯಂತಿ, ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ನಡೆದ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ೯೧ನೆಯ ಹುಟ್ಟುಹಬ್ಬದ ಸಂದರ್ಭಗಳಲ್ಲಿ ಅವರಿಗೆ ಗೌರವ – ಹೀಗೆ ೨೦ಕ್ಕೂ ಹೆಚ್ಚು ಸಂಘ-ಸಂಸ್ಥೆಗಳು ಸನ್ಮಾನಿಸಿ ತಮ್ಮ ಸಂಸ್ಥೆಗಳ ಗೌರವವನ್ನು ಹೆಚ್ಚಿಸಿಕೊಂಡಿವೆ.

### ಪತ್ರಿಕಾ ಕ್ಷೇತ್ರ

ಕಳೆದ ಮೂರು ದಶಕಗಳಿಂದ ಶ್ರೀ ಸಿದ್ಧಗಂಗಾ ಕ್ಷೇತ್ರದಿಂದ ಪ್ರಕಟವಾಗುತ್ತಿರುವ 'ಸಿದ್ಧಗಂಗಾ' ತ್ರೈಮಾಸಿಕದ ಸಂಪಾದಕರಾಗಿ, ನಂತರ ಅದು ಮಾಸಪತ್ರಿಕೆಯಾದ ಮೇಲೆ ಅದರ ಪ್ರಧಾನ ಸಂಪಾದಕರಾಗಿ ಸೇವೆ ಸಲ್ಲಿಸುವುದರ ಮೂಲಕ ಪತ್ರಿಕೆಯ ಸರ್ವಾಂಗೀಣ ಅಭಿವೃದ್ಧಿಗೆ ಕಾರಣರಾಗಿದ್ದರು. ಅವರ ಪಾಂಡಿತ್ಯ, ಅನುಭವವನ್ನು 'ಸಿದ್ಧಗಂಗಾ' ಮಾಸಪತ್ರಿಕೆ ಸದುಪಯೋಗಪಡಿಸಿಕೊಂಡಿದೆ.

### ಶ್ರೇಷ್ಠ ಪ್ರವಚನಕಾರ

ಉತ್ತಮ ವಾಗ್ಮಿಗಳಾದ ಪಂಡಿತ ಎರೇಸೀಮೆ ಅವರು ಕುತೂಹಲ ಕೆರಳಿಸುವಂತೆ ಕಥಾ ಕಾಲಕ್ಷೇಪ ಮಾಡುವುದರ ಮೂಲಕ ಜನಪ್ರಿಯರಾಗಿದ್ದರು. ಅವರದು ಬಹುಮುಖ ಪ್ರತಿಭೆ. ನಾಟಕಕಾರರಾಗಿ, ಪ್ರವಚನಕಾರರಾಗಿ ಅವರು ಸಲ್ಲಿಸಿದ ಸೇವೆ, ಮಾಡಿದ ಸಾಧನೆ ಸದಾ ಹಚ್ಚ ಹಸಿರು.

### ಗ್ರಂಥಗಳ ಅಮೂಲ್ಯ ಕೊಡುಗೆ

ಎರೇಸೀಮೆಯವರು ತಮ್ಮ ವೃತ್ತಿ ಜೀವನದಲ್ಲಿ ಸಂಗ್ರಹಿಸಿದ ಸಾವಿರಾರು ಅಪರೂಪದ ಅಮೂಲ್ಯ ಕೃತಿಗಳ ಸದುಪಯೋಗ ಜನತೆಗೆ, ಅಧ್ಯಯನಶೀಲರಿಗೆ ಲಭ್ಯವಾಗಲಿ ಎಂಬ ಉದಾರತೆಯಿಂದ ತಮ್ಮಲ್ಲಿದ್ದ ಗ್ರಂಥ ಭಂಡಾರವನ್ನು ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿರುವ ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ ಕಾಲೇಜಿನ ಗ್ರಂಥ ಭಂಡಾರಕ್ಕೆ ಕೊಡುಗೆಯಾಗಿ ನೀಡಿ ಇತರರಿಗೆ ಮಾರ್ಗದರ್ಶಿಯಾಗಿದ್ದಾರೆ.

### ಮಹಾನ್ ದಾರ್ಶನಿಕ

ಪಂಡಿತ ಚೆನ್ನಪ್ಪ ಎರೇಸೀಮೆಯವರು ಸರಳತೆ, ಸಜ್ಜನಿಕೆ, ಸಹೃದಯತೆಯಿಂದ ಜನರ ಮನಸ್ಸನ್ನು ಗೆದ್ದವರು. ಅವರೊಬ್ಬ ಅಜಾತಶತ್ರು. ನಡೆ-ನುಡಿಯಲ್ಲಿ ಏಕತಾನತೆಯನ್ನು ಕಾಪಾಡಿಕೊಂಡು ಹತ್ತು ಜನ ಮೆಚ್ಚುವಂತೆ ಒಪ್ಪವಾಗಿ ಬದುಕನ್ನು ಸಾಗಿಸಿದವರು. ಎಂತಹ ಪರಿಸ್ಥಿತಿಯಲ್ಲೂ ಜೀವನೋತ್ಸಾಹವನ್ನು ಕಳೆದುಕೊಳ್ಳದ ಸ್ಥಿತಪ್ರಜ್ಞ. ನೋವಿನಲ್ಲೂ ನಗುವನ್ನು ಕಂಡವರು. ತಾವು ನಕ್ಕು ಇತರರನ್ನೂ ನಗಿಸಿದ ಮಹಾನ್ ದಾರ್ಶನಿಕ ಎರೇಸೀಮೆ ಅವರು.

ಎಂಬೈತ್ತೈದು ವಸಂತಗಳ ಬೇವು-ಬೆಲ್ಲವನ್ನು ಸವಿದು, ಬದುಕನ್ನು ಗಂಭೀರವಾಗಿ ಕಂಡ ಪಂಡಿತ ಚೆನ್ನಪ್ಪನವರು ನಡೆದು ಬಂದ ದಾರಿ, ಏರಿದ ಸಾಧನೆಯ ಮೆಟ್ಟಿಲುಗಳು ಇಂದಿನ ಯುವ ಜನಾಂಗಕ್ಕೆ ದಾರಿದೀಪ.

ಕೆಲವು ತಿಂಗಳುಗಳಿಂದ ಅನಾರೋಗ್ಯದಿಂದ ಹಾಸಿಗೆ ಹಿಡಿದಿದ್ದ ಪಂಡಿತ ಚೆನ್ನಪ್ಪ ಎರೇಸೀಮೆ ಅವರು ಫೆಬ್ರುವರಿ ೨೦ರಂದು ಶಿವನೊಳಗೊಂದಾದರು. ಅವರ ಭೌತಿಕ ದೇಹ ನಮ್ಮ ಕಣ್ಮುಂದೆ ಇಲ್ಲದೆ ಹೋದರೂ ಅವರ ಬಿಟ್ಟು ಹೋದ ಹೆಜ್ಜೆ ಗುರುತುಗಳು ನಮಗೆಲ್ಲ ದಾರಿದೀಪವಾಗಿದೆ.

★

## ಪಂಡಿತ ಎರೇಸೀಮೆ ಅವರ ಮೊಮ್ಮಗನಿಂದ ನುಡಿನಮನ



ಹುಡುಗ ಹರವಿಯವ ।
ಬರೆದ ಕವನವ ॥
ನುಡಿದ ಕನ್ನಡವ ।
ಕಲೆತು ಕನ್ನಡವ ॥

ಕಂಡ ಸಾಹಿತ್ಯನಿವ ।
ಆದ ಹಿರೇಕಾಯಿವ ॥
ಸಾಹಿತ್ಯ ಮೆಚ್ಚಿದ ಇವ ।
ಬೆಳೆದ ಮಠದಲ್ಲಿವ ॥

ಇವರ ನುಡಿ ಚಂದ ।
ಇವರ ನಡೆ ಚಂದ ॥
ಇವರ ಸ್ನೇಹ ಚಂದ ।
ಇವರ ಕವನವು ಚಂದವೋ ಚಂದ ॥

ಬಂದ ಬೆಂಗಳೂರಿಗಿವ ।
ಮಾಡಿದ ಪಾಠ ಹೈಸ್ಕೂಲ್ಲಿವ ॥
ಕಳೆದ ಜೀವನ ಕನ್ನಡಕ್ಕಿವ ।
ಕೊಟ್ಟ ಜೀವವ ಸಾಹಿತ್ಯಕ್ಕಿವ ॥

– ಟಿ.ಎಸ್. ಉಲ್ಲಾಸ್



# ಲಿಂ. ಚನ್ನಪ್ಪ ಎರೇಸೀಮೆಯವರಿಗೆ ಶ್ರದ್ಧಾಂಜಲಿ : ಒಂದು ನೆನಪು

– ಟಿ.ಆರ್. ಮಹಾದೇವಯ್ಯ
೧೩೬, ೧ನೇ ಮುಖ್ಯರಸ್ತೆ, ೧ನೇ ಬ್ಲಾಕ್,
ನಾಗರಬಾವಿ ಎರಡನೇ ಹಂತ, ಬೆಂಗಳೂರು – ೫೬೦ ೦೭೨.

ಸಿದ್ಧಗಂಗೆಯ ಪೂಜ್ಯರ ಪಟ್ಟಾಧಿಕಾರದ ಸುವರ್ಣ ಮಹೋತ್ಸವದ ಸಿದ್ಧತೆಗಳಾಗುತ್ತಿದ್ದ ಸಂದರ್ಭ. ಪೂಜ್ಯರಿಗೆ ಸಮರ್ಪಣೆ ಮಾಡುವ ಅಭಿನಂದನ ಗ್ರಂಥ 'ಸಿದ್ಧಗಂಗಾಶ್ರೀ'ಯು ರೂಪುಗೊಳ್ಳುತ್ತಿತ್ತು. ಅದರ ಸಂಪಾದಕರಾಗಿ ಲಿಂ. ಚೆನ್ನಪ್ಪ ಎರೇಸೀಮೆಯವರು ಅದರಲ್ಲಿ ಸಂಪೂರ್ಣವಾಗಿ ತೊಡಗಿಕೊಂಡಿದ್ದರು. ಅವರ ಜೊತೆ ಕೆಲಸ ಮಾಡುವ ಸೌಭಾಗ್ಯವನ್ನು ಡಾ. ಸಿದ್ಧಯ್ಯ ಪುರಾಣಿಕರ ಅಧ್ಯಕ್ಷರಾಗಿದ್ದ ಸಂಪಾದಕ ಸಮಿತಿ ನನಗೆ ಒದಗಿಸಿತ್ತು. ಗ್ರಂಥವು ಅಭಿನಂದನ ಗ್ರಂಥಗಳ ಶ್ರೇಣಿಯಲ್ಲಿ ಅಪೂರ್ವ ಕೃತಿಯಾಗಬೇಕೆಂದು ನಾಡಿನ ಒಳ-ಹೊರಗಿನ ವಿದ್ವಾಂಸರನ್ನು ಸಂಪರ್ಕಿಸಿ ಲೇಖನಗಳನ್ನು ಬರೆಸಿ ಪ್ರೆಸ್‌ಗೆ ಕೊಟ್ಟಾಗಿತ್ತು. ಆಗ ಈಗಿನಂತೆ ಶೀಘ್ರಗತಿಯ ಮುದ್ರಣ ಸೌಕರ್ಯವಿರಲಿಲ್ಲ. ಆದರೂ ಕೆಲಸ ಚುರುಕಾಗಿ ನಡೆದಿತ್ತು. ಆ ಗ್ರಂಥದಲ್ಲಿ ಅಳವಡಿಸಬೇಕಾದ ಚಿತ್ರಸಂಪುಟದ ಬಗ್ಗೆ ಯೋಚನೆಗೀಡಾದೆವು. ಏಕೆಂದರೆ ಆಗ ಬೆಂಗಳೂರಲ್ಲಿ ಒಂದೆರಡು ಕಡೆಮಾತ್ರ ಬಣ್ಣದ ಆಫ್‌ಸೆಟ್ ಮುದ್ರಣಕ್ಕೆ ಅವಕಾಶವಿದ್ದು, ದುಬಾರಿ ವೆಚ್ಚವಾಗುತ್ತಿತ್ತು. ತಮಿಳುನಾಡಿನ ಶಿವಕಾಶಿಯು ಫೋಟೋ ಮುದ್ರಣಕ್ಕೆ ಹೆಸರಾಗಿತ್ತು. ಅಲ್ಲಿಗೆ ಹೋಗಿ ಕಡಿಮೆ ಬೆಲೆಗೆ ವರ್ಣ ಚಿತ್ರಗಳನ್ನು ಮುದ್ರಿಸಿಕೊಂಡು ಬರಬೇಕೆಂದು ತೀರ್ಮಾನಿಸಿದೆವು. ಅದರಂತೆ ಪೂಜ್ಯರ ಆಶೀರ್ವಾದದೊಡನೆ ನಾನು ಮತ್ತು ಎರೇಸೀಮೆಯವರು ಶಿವಕಾಶಿಗೆ ಹೋದೆವು.

ಅಲ್ಲಿ ಪ್ರಖ್ಯಾತ ವರ್ಣಚಿತ್ರ ಮುದ್ರಕರನ್ನು ಭೇಟಿಮಾಡಿ ಶ್ರೀಮಠದ ಹಾಗೂ ಶ್ರೀ ಶ್ರೀಗಳ ಬಗ್ಗೆ ಅವರಿಗೆ ಮನವರಿಕೆ ಮಾಡಿದೆವು. ನಮಗೆ ತಮಿಳು ಬರದು, ಅವರಿಗೆ ಕನ್ನಡ ತಿಳಿಯದು. ಆದರೆ ಅವರಿಗೆ ಸಿದ್ಧಗಂಗಾ ಕ್ಷೇತ್ರದ ಬಗ್ಗೆ ಸ್ವಲ್ಪಮಟ್ಟಿನ ಪರಿಚಯವಿತ್ತು. ನಾವು ಒದಗಿಸಿದ ಇಂಗ್ಲೀಷ್ ವಿವರಣೆಯ ಸಾಹಿತ್ಯದಿಂದ ಪೂರ್ಣಪರಿಚಯ ಪಡೆದರು. ವ್ಯವಹಾರದ ಮಾತನಾಡಿದೆವು. ಬಹಳ ಕಡಿಮೆ ಖರ್ಚಿನಲ್ಲಿ ಚಿತ್ರಸಂಪುಟ ಮುದ್ರಿಸಿಕೊಡುವ ಭರವಸೆ ನೀಡಿದರು. ನಮಗೆ ಆಶ್ಚರ್ಯವಾಯಿತು. ''ನಾಳೆ ನಿಮಗೆ ಅವುಗಳ ಪ್ರೂಫ್ ತೋರಿಸುತ್ತೇವೆ. ನೋಡಿ ನೀವು ಒಪ್ಪಿಗೆ ನೀಡಿದರೆ ವಾರದೊಳಗೆ ಎಲ್ಲಾ ಅಚ್ಚುಮಾಡಿ ಕಳಿಸಿಕೊಡುತ್ತೇವೆ' ಎಂದರು.

ಆ ದಿನ ನಾವು ಅಲ್ಲಿ ಉಳಿಯುವುದು ಅನಿವಾರ್ಯವಾಯಿತು. ಸುಮ್ಮನೆ ಕಾಲ ಕಳೆಯುವುದು ಹೇಗೆ? ರಾಮೇಶ್ವರ ಅಲ್ಲಿಗೆ ಸಮೀಪ. ಅಲ್ಲಿಗೆ ಹೋಗಿ ಬರೋಣ ಎಂದರು ಎರೇಸೀಮೆ. ಜೊತೆಗೆ ಇನ್ನೊಂದು ಮಾತನ್ನೂ ಸೇರಿಸಿದರು. 'ರಾಮೇಶ್ವರಕ್ಕೆ ಹೋಗಿ ಬರುವ ಖರ್ಚನ್ನು ನಾವೇ ಹಾಕಿ ಕೊಳ್ಳೋಣ. ಮಠದ ದುಡ್ಡು ಬಳಸುವುದು ಬೇಡ ಎಂದರು. ಹಾಗೇ ಮಾಡೋಣವೆಂದು ನಾನು ಹೇಳಿದ ಮೇಲೆ ಇಬ್ಬರಿಗೂ ಸಮಾಧಾನ ! ಬೆಳಿಗ್ಗೆಯೇ ಅಲ್ಲಿಗೆ ಹೋಗಿ ಸಂಜೆಗೆ ಹಿಂತಿರುಗಿದೆವು.

ತಮಿಳುನಾಡಿನಲ್ಲಿ ತಮಿಳುಬಿಟ್ಟರೆ ಬೇರೆ ಭಾಷೆ ನಡೆಯುವುದಿಲ್ಲ. ಆ ಭಾಷೆ ಬಾರದವರಿಗೆ ವ್ಯವಹಾರ ಸ್ವಲ್ಪ ಕಷ್ಟವೇ. ಹೋಟೆಲಿಗೆ ಹೋದಾಗಲೆಲ್ಲಾ ನಮಗೆ ಅದು ಅನುಭವಕ್ಕೆ ಬರುತ್ತಿತ್ತು. ಎರೇಸೀಮೆಯವರಿಗೆ ಕುಡಿಯಲು ಬಿಸಿನೀರೇ ಬೇಕು. ಹೋಟೆಲುಮಾಣಿಗೆ ಬಿಸಿನೀರು ಬೇಕು ಎಂದರೆ ಅರ್ಥವಾಗಲಿಲ್ಲ. ಬೇರೊಂದು ಲೋಟದಲ್ಲಿ ತಣ್ಣೀರನ್ನೇ ತಂದಿಟ್ಟ, ಆಗ ಎರೇಸೀಮೆಯವರು ತಂದಿಟ್ಟ ಲೋಟದಲ್ಲಿದ್ದ ನೀರಿಗೆ ಬೆರಳನ್ನು ಅದ್ದಿ ಅದು ಸುಟ್ಟಿತೆಂಬಂತೆ ತಕ್ಷಣ ಹಿಂತೆಗೆದುಕೊಂಡು 'ಅಂಥ ನೀರು ಬೇಕು' ಎಂದರು. ನಾಟಕೀಯವಾದ ಅವರ ಅಭಿನಯದಿಂದ ಆ ತಮಿಳನಿಗೆ ಅವರ ಬೇಡಿಕೆ ಅರ್ಥವಾಗಿ 'ಸುಡು ತಣ್ಣಿಯಾ!' ಎಂದು ನಗುತ್ತಾ ಹೋಗಿ ಎರಡು ಲೋಟ ಬಿಸಿನೀರನ್ನು ತಂದಿಟ್ಟನು. ಚೆನ್ನಪ್ಪನವರು ಇನ್ನೊಬ್ಬರ ಮನದ ಇಂಗಿತವನ್ನು ಅರಿತು ಅವರ ನಾಡಿಯಮಿಡಿತಕ್ಕೆ ತಕ್ಕ ಹಾಗೆ ಸ್ಪಂದಿಸುವುದರಲ್ಲಿ ನಿಪುಣರಾಗಿದ್ದಂತೆ, ತಮ್ಮ ಅನಿಸಿಕೆ - ಅಭಿಪ್ರಾಯಗಳನ್ನು ಕೇಳುಗರಿಗೆ ಮನದಟ್ಟು ಮಾಡಿಕೊಡುವಲ್ಲಿಯೂ ನಿಷ್ಣಾತರಾಗಿದ್ದುದನ್ನು ಬಲ್ಲ ನಾನು ಮೇಲಿಂದ ಮೇಲೆ ಆ ಘಟನೆಯನ್ನು ನೆನಪು ಮಾಡಿಕೊಳ್ಳುತ್ತೇನೆ.

ಇತ್ತೀಚೆಗಷ್ಟೇ ನಮ್ಮನ್ನಗಲಿದ ಅವರ 'ಪರೋಕ್ಷ ವಿನಯ'ದ ಸಂದರ್ಭದಲ್ಲಿ ಇಂಥ ಅನೇಕ ನೆನಪಿನ ದಿಬ್ಬಣಗಳನ್ನು ಅವರ ಆತ್ಮೀಯರು, ಬಂಧುಗಳು ನಿರೂಪಿಸಿದ್ದುಂಟು. 'ಸಿದ್ಧಗಂಗಾ' ಪತ್ರಿಕೆಯ ಪ್ರಧಾನ ಸಂಪಾದಕರಾಗಿ ಸತತ ಮೂರು ದಶಕಗಳ ಕಾಲ ಏಕನಿಷ್ಠೆಯಿಂದ ದುಡಿದ ಹಿರಿಯರಾದ ಎರೇಸೀಮೆ ಚೆನ್ನಪ್ಪನವರ ನೆನಪಿನ ಒಂದು ಪ್ರಸಂಗವನ್ನು ಮಾತ್ರ ಈ ಪತ್ರಿಕೆಯ ಓದುಗರೊಡನೆ ಹಂಚಿಕೊಳ್ಳಲು ಬರೆದಿದ್ದೇನೆ.

★





# ಬೆಂಗಳೂರಿನಲ್ಲಿ ಲಿಂ. ಚನ್ನಪ್ಪ ಎರೇಸೀಮೆ ಅವರಿಗೆ ಶ್ರದ್ಧಾಂಜಲಿ



ಪರಮಪೂಜ್ಯ ಶ್ರೀ ಶ್ರೀಗಳವರ
ದಿವ್ಯಸಾನ್ನಿಧ್ಯದಲ್ಲಿ ಶ್ರದ್ಧಾಂಜಲಿ ಸಭೆ.
ವೇದಿಕೆಯಲ್ಲಿ :
ವಿವಿಧ ಹರಗುರು ಚರಮೂರ್ತಿಗಳು.




ಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ಅಧ್ಯಕ್ಷ
ಶ್ರೀ ಎನ್. ಬಸವಾರಾಧ್ಯ ಅವರಿಂದ
ಲಿಂ. ಎರೇಸೀಮೆ ಅವರಿಗೆ ಶ್ರದ್ಧಾಂಜಲಿ




ಹಿರಿಯ ಸಾಹಿತಿ
ಶ್ರೀ ಟಿ.ಆರ್. ಮಹಾದೇವಯ್ಯ
ಅವರಿಂದ ನುಡಿನಮನ

## STATEMENT OF OWNERSHIP PARTICULARS ABOUT "SIDDAGANGA"

**Form IV (See Rule 5)**

| | | |
|---|---|---|
| Place of Publication | : | **Siddaganga (Regd.)**<br>Siddaganga Mutt,<br>Tumkur District – 572 104 |
| Periodicity of its Publication | : | **Monthly** |
| Printer's Name | : | **Sri G. Nagasundar** |
| Whether Citizen of India | : | **Indian** |
| Address | : | **M/s. Geethanjali Graphics**<br>No. 5, M.S.R. Indl., Estate,<br>Gokul Extension,<br>Bangalore – 560 054. |
| Publisher's Name | : | **Sri H. B. Gangadharaiah** |
| Whether Citizen of India | : | **Indian** |
| Address | : | **Publisher**<br>Old Students Association,<br>siddaganga Mutt,<br>Tumkur District – 572 104 |
| Editor's Name | : | **H. V. Veerabhadraiah** |
| Nationality | : | Indian |
| Address | : | **Editor,** "Siddaganga"<br>Siddaganga Mutt,<br>Tumkur District – 572 104 |

I, H.B. Gangadharaiah hereby declare that the particulars given above are true to the best of my knowledge and belief.

Bangalore
Date : 1-3-2004

**(H.B. Gangadharaiah)**
Signature of Publisher








# ಶ್ರೀ ಸಿದ್ಧೇಶ್ವರ ಪುರಾಣ


– ಕೋ.ರಂ. ಬಸವರಾಜು
ಶ್ರೀ ಸಿದ್ಧಗಂಗಾ ಕ್ಷೇತ್ರ


ಭಾಗ-೩

ಸಿದ್ಧೇಶ್ವರ ಪುರಾಣದ ಮೂರನೆಯ ಸಂಧಿಯಿಂದ ಹತ್ತೊಂಬತ್ತನೆಯ ಸಂಧಿಯವರೆಗೆ ಶಿವಯೋಗಿಗಳು ಪ್ರಕಟ ಮಾಡಿದ ಪವಾಡಗಳ ಉಪವರ್ಣನೆಯಿದೆ. ಈ ಸಂಧಿಯಲ್ಲಿ ಮೂರು ಪವಾಡಗಳು ಉಕ್ತವಾಗಿವೆ.

### ೧. ನೀರಿಂದ ದೀಪ ಉರಿಸಿದ ಪವಾಡ

ಶ್ರೀ ಗೋಸಲ ಪರಂಪರೆಯ ನಡವಳಿಕೆಯಂತೆ ಶ್ರೀ ಸಿದ್ಧಲಿಂಗೇಶ್ವರರು ತಮ್ಮ ಗುರುಗಳಾದ ಶ್ರೀ ಗೋಸಲ ಚನ್ನಬಸವೇಶ್ವರರ ತ್ರಿವಿಧ ಶುಶ್ರೂಷೆಯಲ್ಲಿ ವಿಧಿವತ್ತಾಗಿ ನಿರತರಾಗಿರುತ್ತಾರೆ. ಹೀಗೆ ಗುರುಸೇವೆ ಮಾಡುತ್ತಿರಲು ಒಂದು ದಿನ ಗುರುಗಳ ಲಿಂಗಾರ್ಚನೆಯ ಸಮಯದಲ್ಲಿ ದೀಪಕ್ಕೆ ಎಣ್ಣೆಯಿಲ್ಲದಿರಲು ನೀರನ್ನೇ ಎರೆದು ಬತ್ತಿಯನ್ನಿಕ್ಕಿ ಹಚ್ಚುತ್ತಾರೆ. ಆಗ ಆ ಸೊಡರು ಪರಮ ಪ್ರಕಾಶದಿಂದ ಬೆಳಗುತ್ತದೆ. ಕೂಡಲೆ ಗುರುಗಳು ಶಿಷ್ಯನಲ್ಲಿನ ಪರಮಕಾರಣಿಕ ತನವನ್ನು ಗುರುತಿಸಿ ''ಇನ್ನು ನಿನ್ನಯ ಕರದ ಸೇವೆಯ ಕೊಂಬುದಿದು ನನ್ನಿಯಿಂದೆಮಗೆ ಸಲ್ಲದು'' ಎಂದು ಹೇಳಿ ಕಾರಣಿಕತನವನ್ನು ಕಂಡ ಮೇಲೆ ಶಿಷ್ಯನಿಂದ ಸೇವೆಮಾಡಿಸಿಕೊಳ್ಳ ಬಾರದು ಎಂಬ ಗೋಸಲ ಗುರು ಪರಂಪರೆಯ ನಡವಳಿಕೆ ಯನುಸೃತ್ಯ ಸೇವೆ ಮಾಡಿಸಿಕೊಳ್ಳುವುದನ್ನು ನಿಲ್ಲಿಸುತ್ತಾರೆ. ಮತ್ತು ಶಿಷ್ಯನು ತೋರಿದ ಈ ಅಘಟಿತ ಘಟನೆಯನ್ನು ಮನಗಂಡು ನಂತರ ಚರಪಟ್ಟಾಧಿಕಾರವನ್ನು ಕೊಡುತ್ತಾರೆ. ಚರಧರ್ಮವ ಕೈಗೊಂಡು ಜಗವ ಬೋಧಿಸಲು ಚರಮೂರ್ತಿಗಳೊಡನೆ ಕಳುಹಿಸುತ್ತಾರೆ.



### ೨. ಅರುಣಾಚಲೇಶ್ವರನಿಂದ ಪದಕ ಪಡೆದ ಪವಾಡ

ಹೀಗೆ ಸಿದ್ಧಲಿಂಗೇಶ್ವರರು ೭೦೧ ಜನ ವಿರಕ್ತರೊಡಗೂಡಿ ೩.೦೦ ಶಿಷ್ಯವೃತ್ತಿಯ ಜಂಗಮರ ಸಹಿತ ಚರಮೂರ್ತಿಗಳೊಡನೆ ಹೊರಟು ದಕ್ಷಿಣದಲ್ಲಿ ಕಂಚಿ-ಕಾಳಹಸ್ತಿ-ಚಿದಂಬರ-ರಾಮೇಶ್ವರ-ಪೊನ್ನಾಂಬಲ ಮುಂತಾದ ಪುಣ್ಯಕ್ಷೇತ್ರಗಳಲ್ಲಿ ಚರಿಸಿ ಅರುಣಾಚಲಕ್ಕೆ ಬರುತ್ತಾರೆ. ಆ ಹೊತ್ತಿಗೆ ರಾತ್ರಿಯಾಗುತ್ತದೆ. ಅರುಣಾಚಲೇಶ್ವರ ಮಂದಿರವನ್ನು ಪ್ರವೇಶಿಸಿ ಚರಮೂರ್ತಿಗಳೊಡಗೂಡಿ ಲಿಂಗಾರ್ಚನೆ ಗೈದು ಶಿವಾನಂದತುಂದಿಲ ರಾಗಿರುತ್ತಾರೆ. ಆ ರಾತ್ರಿ ಅರಣಾಚಲೇಶ್ವರನು ದೇವಾಲಯದ ಪೂಜಕರ ಕನಸಿನಲ್ಲಿ ಹೋಗಿ ಎಲೈ! ಪೂಜಕರಿರಾ! ಯೋಗಿಗಳ ರಸನಾದ ಸಿದ್ಧಲಿಂಗೇಶ್ವರರು ಲೋಕವನ್ನು ಪಾವನಗೊಳಿಸುತ್ತಾ ಕರುಣದಿಂದ ಇಲ್ಲಿಗೆ ಐತಂದಿದ್ದಾನೆ. ಆ ಯುತಿವರಂಗೆ ನನ್ನ ಮುತ್ತಿನ ಪಂಚತಾವಡ (ಐದೆಳೆ ಸರದ ಪದಕ) ಭಸ್ಮಪೂರ್ವಕವಾಗಿ ದಾನಮಾಡುವುದು'' ಎಂದು ಹೇಳುತ್ತಾನೆ. ಆಗ ಪೂಜಕರು ಅರುಣಾಚಲೇಶ್ವರನ್ನು ಕುರಿತು ''ಆ ಗುರುವರೇಣ್ಯನು ಹೇಗಿರುವನು? ಅವನ ಕುರುಹು ಯಾವುದು? ಎಂದು ಕೇಳಲು ''ನನ್ನಾಲಯದ ದಕ್ಷಿಣದ ಅಂಕಣ ದಲ್ಲಿರುವ ಕಂಭವನ್ನು ಒರಗಿ ಕುಳಿತಿರುತ್ತಾನೆ'' ಎಂದು ಯೋಗಿಯ ಕುರುಹನ್ನು ಅರುಣಾಚಲೇಶ್ವರನು ಹೇಳುತ್ತಾನೆ. ಆ ತಕ್ಷಣವೇ ಪೂಜಕರಿಗೆ ಎಚ್ಚರವಾಗುತ್ತದೆ. ಅರುಣಾಚಲೇಶ್ವರನ ಆದೇಶದಂತೆ ಎಲ್ಲರೂ ಕೂಡಿ ದೇವಾಲಯಕ್ಕೆ ಬಂದು ಕುರುಹು ಹಿಡಿದು ಕಂಡು ಯತೀಶ್ವರನಿಗೆ ಭಕ್ತಿಯಿಂದ ನಮಸ್ಕರಿಸಿ ''ಮಹಾಮಹಿಮನೆ! ನಮ್ಮ ಶೋಣಗಿರಿನಾಥನು ಒಲ್ಮೆಯಿಂದ ತನ್ನ ಪಂಚತಾವಡವನ್ನು ನಿಮಗೆ ಕೊಡಹೇಳಿದ್ದಾನೆ. ಕೃಪೆಮಾಡಿ ಕೈಗೊಳ್ಳುವುದು'' ಎಂದು ಭಕ್ತಿಯಿಂದ ಅರ್ಪಿಸುತ್ತಾರೆ. ಯತೀಶ್ವರರು ಅದನ್ನು ಸ್ವೀಕರಿಸಿ ಧರಿಸಲು

ಒಪ್ಪುತ್ತಾರೆ. ಆಗ ಜೊತೆಯಲ್ಲಿದ್ದ ಚರಮೂರ್ತಿಗಳು ಮನಸ್ಸಿನಲ್ಲಿ ಕುದಿಕುದಿದು ಅದು ಎಲ್ಲರಿಗೂ ಸೇರಬೇಕೆಂದು ಗುಜುಗುಜು ಗುಟ್ಟುತ್ತಾರೆ. ಮತ್ತು ಹಂಚಿಕೊಳ್ಳಲು ಕೊಡುಕೊಡೆಂದು ಕಾಡುತ್ತಾರೆ. ಅದನ್ನು ಪಡೆದು ಹೊರಚಾಡುತ್ತಾರೆ. ಆ ಚರಮೂರ್ತಿಗಳ ಕೊರಚಾಟಕ್ಕೆ ಹೇಸಿ, ಲೋಭಜಂಗಮರ ವರ್ತನೆಗೆ ನೊಂದು ಇಂಥವರೊಡನೆ ಇರ್ಪುದುಚಿತವಲ್ಲ ಎಂದು ಎದ್ದು ಹೊರಡುತ್ತಾರೆ. (ಬೇರೆಡೆ ಈ ಪವಾಡವು ವ್ಯತ್ಯಾಸವಾಗಿ ಕಾಣಿಸಿಕೊಂಡಿದೆ. ಅರುಣಾಚಲೇಶ್ವರನೇ ಪ್ರತ್ಯಕ್ಷವಾಗಿ ಸ್ವಯಂ ತಾನೇ ಪಂಚತಾವಡವನ್ನು ಸಿದ್ಧಲಿಂಗೇಶ್ವರರ ಕೊರಳಿಗೆ ಹಾಕಿದಂತೆಯೂ, ಬೆಳಿಗ್ಗೆ ಅರ್ಚಕರು ಬಂದು ನೋಡಿ ರಾಜನಿಗೆ ದೂರುಕೊಟ್ಟಂತೆಯೂ, ಎಲ್ಲರೆದುರಿಗೆ ಪುನಃ ಅರುಣಾಚಲೇಶ್ವರನಿಂದಲೇ ಪಡೆದು ರಾಜನನ್ನು ಮೊದಲುಗೊಂಡು ಎಲ್ಲರನ್ನೂ ಪರಿವರ್ತನೆ ಮಾಡಿದಂತೆಯೂ ವರ್ಣಿಸಲಾಗಿದೆ.)

### ೩. *ಕುಂಬಳೇಶ್ವರನ ಭಕ್ತನಿಂದ ಭಿಕ್ಷೆ ಪಡೆದದ್ದು*

**ಮುಂ**ದೆ ಸಿದ್ಧಲಿಂಗ ಯತಿಗಳು ನಾನಾ ದೇಶಗಳಲ್ಲಿ ಸಂಚರಿಸುತ್ತಾ (ಲೋಭಿಜಂಗಮರ ಕೊರಚಾಟಕ್ಕೆ ಹೇಸಿ ಅವರನ್ನು ತೊರೆದು ಮುಂದೆ ಒಬ್ಬರೇ ಸಂಚರಿಸಿದರೆಂದು ಇಲ್ಲಿ ಹೇಳಲಾಗಿದೆ. ಆದರೆ ಉಳಿದ ಕಾವ್ಯಗಳಲ್ಲಿ ಚರಮೂರ್ತಿಗಳೊಡನೆ ದೇಶಸಂಚಾರ ಮಾಡಿದಂತೆ ತಿಳಿಸಲಾಗಿದೆ). ಉತ್ತರಕ್ಕೆ ಪ್ರಯಾಣವನ್ನು ಬೆಳೆಸುತ್ತಾರೆ. ಆಗೊಂದು ದಿನ ಪರಶಿವನಿಗೆ ಇವರ ವಿರತಿಯನ್ನು ಪರೀಕ್ಷೆ ಮಾಡಬೇಕೆಂಬ ಇಚ್ಛೆಯುಂಟಾಗಿ ಯಾವ ಶಿವಭಕ್ತರಂಗಣದಲ್ಲಿಯೂ ಭಿಕ್ಷೆ ದೊರೆಯ ದಂತೆ ಮಾಡುತ್ತಾನೆ. ಗ್ರಾಮೇ ಏಕರಾತ್ರಿ : ನಗರೇದ್ವಿರಾತ್ರಿ : ಎಂಬಂತೆ ಚರಿಸಿ ಯಾವ ಶಿವಭಕ್ತರಂಗಣಕ್ಕೆ ಹೋಗಿ ಭಿಕ್ಷಬೇಡಿದರೂ ಇಲ್ಲ ಎನ್ನುತ್ತಾರೆ, ಅಥವಾ ಸುಮ್ಮನಿರುತ್ತಾರೆ. ಹೀಗೆ ಒಂಭತ್ತುದಿನ ಏಕಪ್ರಕಾರವಾಗಿ ಎಲ್ಲಿಯೂ ಭಿಕ್ಷ ದೊರೆಯುವುದಿಲ್ಲ. ಆದರೂ ಸಿದ್ಧಲಿಂಗೇಶ್ವರರು ಕಿಂಚಿತ್ತೂ ಕಳವಳಿಸಲಿಲ್ಲ, ಧೈರ್ಯ ಗುಂದಲಿಲ್ಲ. ಕೇವಲ ಲಿಂಗಾರ್ಚನೆ ಲಿಂಗಪಾದೋದಕ ಮಾತ್ರದಿಂದಲೇ ಪ್ರಾಣಧರ್ಮಗಳಿಂದ ಹಸಿವು ಬಾಯಾರಿಕೆಗಳ ಬಾಧೆಯಿಲ್ಲದೆ ನಿತ್ಯಾನಂದದಲ್ಲಿ ವಿಹರಿಸುತ್ತಾ ಸಂಚರಿಸುತ್ತಾರೆ.

**ಮುಂ**ದೆ ರೋಣಖೇಡವೆಂಬ ಗ್ರಾಮಕ್ಕೆ ಬರುತ್ತಾರೆ. ಅಲ್ಲಿನ ಕುಂಬಳೇಶ್ವರ ದೇವಾಲಯಕ್ಕೆ ಹೋಗಿ ಕುಂಬಳೇಶ್ವರನ ದರ್ಶನ ಮಾಡುವ ಹೊತ್ತಿಗೆ ಬೆಳಗಾಗುತ್ತದೆ. ಆ ಆಲಯದಲ್ಲಿಯೇ ಮೂರ್ತಗೊಂಡಿರುತ್ತದೆ. ಆ ರಾತ್ರಿ ಕುಂಬಳೇಶ್ವರ ಲಿಂಗವು ಜಂಗಮ ವೇಷವನ್ನು ಧರಿಸಿ ಒಬ್ಬ ಭಕ್ತನ ಕನಸ್ಸಿನಲ್ಲಿ ಹೋಗಿ ''ಎಲೈ ಭಕ್ತನೆ ನಾನು ಹಸಿದಿಹೆನು ಊಟವಂ ನೀಡು'' ಎನ್ನುತ್ತದೆ. ಆಗ ಆ ಭಕ್ತ ಥಟ್ಟನೆ ಎಚ್ಚರಗೊಂಡು ಪಕ್ಕದಲ್ಲಿ ಮಲಗಿದ್ದ ತನ್ನ ಹೆಂಡತಿಯನ್ನು ಎಚ್ಚರಿಸಿ ಸಂಗತಿಯನ್ನು ಹೇಳುತ್ತಾನೆ. ಆಗ ಆಕೆಯು ''ಆ ದಿವ್ಯತೇಜೋಮೂರ್ತಿ ಜಂಗಮ ಬೇರಾರೂ ಅಲ್ಲ, ಸಾಕ್ಷಾತ್ ನಮ್ಮ ಕುಂಬಳೇಶ್ವರನೆ, ನಮ್ಮ ಮೇಲೆ ಕೃಪೆಹರಿಸಿ ಬಂದಿದ್ದಾನೆ. ಮುಂದಿನ ಸೋಮವಾರದಂದು ಜಂಗಮರನ್ನು ಕರೆತಂದು ಅರ್ಚನ ಅರ್ಪಣಾದಿಗಳನ್ನು ಮಾಡಿ ತುಪ್ಪದ ಪಾಯಸವನ್ನು ಕುಂಬಳೇಶ್ವರನಿಗೆ ನೈವೇದ್ಯಮಾಡೋಣ. ಈಗ ಮಲಗು'' ಎಂದು ಹೇಳಿ ಇಬ್ಬರೂ ನಿದ್ರಿಸುತ್ತಾರೆ. ಆಗ ಮತ್ತೆ ಕುಂಬಳೇಶನು ಕನಸ್ಸಿನಲ್ಲಿ ಬಂದು ಬಡಿಗೆಯಿಂದ ಇಬ್ಬರನ್ನೂ ಬಡಿದು ''ನಾನು ಕಡು ಹಸಿದಿದ್ದೇನೆ ತಡವೇಕೆ? ಈಗಲೇ ನೆಲವಿನ ಮಡಕೆಯಲ್ಲಿಟ್ಟಿರುವ ತಂಗಳನ್ನ, ಉಪ್ಪಿನಕಾಯಿ, ಸಣ್ಣಕುಡಿಕೆಯಲ್ಲಿ ಮೊಸರನ್ನ ತಂದು ಈಗ ಎಡೆಮಾಡುವುದು'' ಎಂದು ಹೇಳುತ್ತಾನೆ. ಆಗ ತಕ್ಷಣ ಭಕ್ತದಂಪತಿಗಳು ದೀಪವಹಚ್ಚಿ ಬೆಳಕುಮಾಡಿ ಭಕ್ತಿಯಿಂದ ತಂಗಳನ್ನ ಉಪ್ಪಿನಕಾಯಿ ಮೊಸರನ್ನ ತೆಗೆದುಕೊಂಡು ಸಕಲ ಶಿವಭಕ್ತರೊಡಗೂಡಿ ದೀವಟಿಗೆ ಹಿಡಿದು ಊರಹೊರಗಿರುವ ದೇವಾಲಯಕ್ಕೆ ಬಂದು ಅಲ್ಲಿರುವ ಜಂಗಮವರೇಣ್ಯರನ್ನು ಕಂಡು ಪದಕೆರಗಿ ಸಾಕ್ಷಾತ್ ಕುಂಗಳೇಶ್ವರನೆಂದೇ ಭಾವಿಸಿ'' ಲಿಂಗಾರ್ಪಿತವಗೈಯ್ಯುವದೆಂದು ಬಿನ್ನವಿಸಿಕೊಳ್ಳುತ್ತಾರೆ. ಅದರಂತೆ ಸಿದ್ಧಲಿಂಗೇಶ್ವರರು ಸ್ವೀಕರಿಸಿ ಆ ಭಕ್ತರಿಗೆ ನಿತ್ಯಪದವಿಯನ್ನಿತ್ತು ಮುಂದೆ ಕೊಂಕಣದೇಶ ಕೈತರುತ್ತಾರೆ.

### *ವಿಶೇಷ ವಿಚಾರಗಳು :*

೧. ಪವಾಡಗಳು : ಅಂಜನಾದಿ ಕುಟಿಲ ಸಿದ್ಧಿಗಳನ್ನು ಹೊರಗಿಟ್ಟು, ಪವಾಡದ ಅರ್ಥವನ್ನು ಹೀಗೆ ಪರಿಭಾವಿಸ ಬಹುದು : ಪವಾಡವೆನ್ನುವುದು ಒಂದು ಅಲೌಕಿಕಯೋಗಸಿದ್ಧಿ. ಯೋಗಿಯಾದವನು ತನ್ನಯೋಗಶಕ್ತಿಯಿಂದ ಪ್ರಕೃತಿಯನ್ನು ಜಯಿಸುತ್ತಾನೆ. ಆಗ ಪ್ರಕೃತಿಯ ನಿಯಮಗಳು ಅವನ ಸ್ವಾಧೀನವಾಗುತ್ತವೆ. ಆ ಯೋಗಿಯ ಇಷ್ಟದಂತೆ ಅದು (ಪ್ರಕೃತಿ) ವರ್ತಿಸುತ್ತದೆ. ಆಗ ಯೋಗಿಯು ಲೋಕಕಲ್ಯಾಣಕ್ಕಾಗಿ ಅದ್ಭುತವಾದ ಕ್ರಿಯೆಗಳನ್ನು ಮಾಡುತ್ತಾನೆ. ಹೀಗೆ ಪ್ರಕೃತಿಯನ್ನೇ ಗೆದ್ದ ಅವನ ಕ್ರಿಯೆಗಳು ಪ್ರಕೃತಿಗೆ ಅಧೀನವಾಗಿರುವ ಲೋಕಕ್ಕೆ ಪವಾಡಗಳಾಗಿ ತೋರುತ್ತವೆ.

**ಈ** ಮೇಲಿನ ಪವಾಡಗಳನ್ನು ಒಂದೆರೆಡು ಉದಾಹರಣೆಗಳಿಂದ ಋಷ್ಯಾಶ್ರಮಗಳನ್ನು ವರ್ಣಿಸುವಾಗ - ಹುಲಿ-ಹುಲ್ಲೆ, ಸಿಂಹ, ಆನೆ, ಹಾವು-ನವಿಲುಗಳು ಪರಸ್ಪರ ಮೈತ್ರೀಭಾವದಿಂದ್ದುವು ವಿಚಾರವನ್ನು ಓದಿ ತಿಳಿದಿದ್ದೇವೆ. ಇದಕ್ಕೆ ಕಾರಣ – ಯೋಗಾಭ್ಯಾಸದಿಂದ ಹಿಂಸಾ ಸ್ವಭಾವವೇ ನಷ್ಟವಾದ ಋಷಿಯ ಅಥವಾ ಯೋಗಿಯ ಸಾನ್ನಿಧ್ಯದ ಪ್ರಭಾವವೇ. ಇದು ಕೇವಲ ಅಷ್ಟಾಂಗಯೋಗದ ಯಮಾಂಗದಲ್ಲಿನ ಒಂದಾದ ಅಹಿಂಸಾಯೋಗ ಸಿದ್ಧಿಯ ಫಲ. ಇನ್ನೊಂದು ಉದಾ : ಒಬ್ಬ ಯೋಗಿ ಏನು ನುಡಿಯುತ್ತಾನೆಯೋ ಅದು ನಡೆದುಹೋಗುತ್ತೆ. ಅಂದರೆ







ಈ ವಾಕ್‌ಸಿದ್ಧಿ ಯಮದ ಅಂಗವಾದ ಸತ್ಯಯೋಗದ ಪವಾಡ. ಪ್ರಸ್ತುತ ಪರಿಸ್ಥಿತಿಯ ಹಿನ್ನಲೆಯ ಹೇಳುವುದಾದರೆ ಈ ಅಹಿಂಸೆ ಮತ್ತು ಸತ್ಯವನ್ನು ಜೀವನದಲ್ಲಿ ಅಳವಡಿಸಿಕೊಂಡು ಗಾಂಧೀಜಿ ಎಂತಹ ಅದ್ಭುತ ಪವಾಡಗಳನ್ನು ಎಸಗಿದ್ದಾರೆ! ಹೀಗಿರುವಾಗ ಇನ್ನು ಅಷ್ಟಾಂಗಯೋಗವನ್ನು ಸಾಂಗವಾಗಿ ಸಾಧಿಸಿದ ಪೂರ್ಣಯೋಗೀಶ್ವರರು ಅದ್ಭುತವಾದ ಪವಾಡಗಳನ್ನೂ ಪ್ರದರ್ಶಿಸುವ ಶಕ್ತಿಯುಳ್ಳವರಾಗಿತ್ತಾರೆಂಬುದರಲ್ಲಿ ಅನುಮಾನವೇ ಇಲ್ಲ. (ಸಿದ್ದೇಶ್ವರ ಪುರಾಣ : ಪ್ರಸ್ತಾವನೆ, ಪು.೧೫). ಇನ್ನು ಪರಮಾತ್ಮನ ಅಂಶಾವತಾರಿಗಳಲ್ಲಿ ಈ ಪವಾಡಗಳು ಲೀಲೆಯೋಪಾದಿಯಲ್ಲಿ ಜರುಗುತ್ತವೆ. ಶಂಕರಾಚಾರ್ಯರು ಪರಕಾಯ ಪ್ರವೇಶಮಾಡಿದ್ದು, ಮಧ್ವಾಚಾರ್ಯರು ಮುಗುಳುತ್ತಿರುವ ಹಡಗನ್ನು ನಿಲ್ಲಿಸಿದ್ದು, ಜ್ಞಾನದೇವರು ಕೋಣನಿಂದ ವೇದವನ್ನು ಓದಿಸಿದ್ದು – ಮುಂತಾದ ಪ್ರಸಂಗಗಳನ್ನು ಉದಾಹರಿಸಬಹುದು.

**ತ**ತ್ರಾಪಿ ಶಿವಯೋಗಿಗಳ ದಿವ್ಯ ಬದುಕಿನಲ್ಲಿ ಅವರ ಶಿವಯೋಗದ ಅಥವಾ ಲಿಂಗತಪಸ್ಸಿನ ಸಿದ್ದಿಯಿಂದ ಅನೇಕ ಅತಿಮಾನುಷ ಘಟನೆಗಳು ನಿತ್ಯಲಿಂಗ ಕ್ರಿಯೆಗಳಾಗಿ ನಡೆದುಹೋಗುತ್ತವೆ. ಮತ್ತು ಸಂಕಲ್ಪ ಮಾತ್ರದಿಂದಲೇ ನಡೆದು ಹೋಗುವ ಆ ಶಿವಯೋಗಿಗಳ ಪವಾಡದ ಮಹಿಮೆ ಮಾತು ಮನಗಳನ್ನು ಮೀರಿರುತ್ತದೆ.

**ಶ್ರೀ** ಸಿದ್ಧಲಿಂಗೇಶ್ವರರು ತೋರಿದ ಒಟ್ಟು ಪವಾಡಗಳನ್ನು ೩ ಭಾಗವನ್ನಾಗಿ ಮಾಡಬಹುದು.

೧. ಶೈವ ವೈಷ್ಣವ ಜೈನಧರ್ಮಕ್ಕಿಂತಲೂ ವೀರಶೈವಧರ್ಮವು ಉತ್ಕೃಷ್ಟವಾದದ್ದು ಎಂಬುದನ್ನು ತೋರಿಸುವ ಪವಾಡಗಳು.

೨. ಸ್ಥಾವರಲಿಂಗಕ್ಕಿಂತೂ ಜಂಗಮಲಿಂಗವು ಶ್ರೇಷ್ಠವಾದದ್ದು ಎಂಬುದನ್ನು ಸ್ಥಾಪಿಸುವ ಪವಾಡಗಳು.

೩. ಲೋಕದ ಕಾರಣ್ಯಕ್ಕಾಗಿ ಪ್ರಕಟಮಾಡಿದ ಪವಾಡಗಳು.

### ೨. *ಪವಾಡಗಳ ಸಂಕೇತಗಳು*

**ಒಂ**ದನೆಯ ಪವಾಡದಲ್ಲಿ – ನೀರಿನ ಒಡಲಲ್ಲಿ ಅಡಗಿರುವ ಜ್ಯೋತಿ (ಅಗ್ನಿ)ಯು ಪ್ರಕಟವಾದಂತೆ ಗುರುಸೇವೆಯಿಂದ ಶಿಷ್ಯನ ಒಡಲಲ್ಲಿ ಅಡಗಿರುವ ಬೆಳಕು ಪ್ರಕಟವಾಗುತ್ತದೆ.

**ಎ**ರಡನೆಯ ಪವಾಡದಲ್ಲಿ – ಸ್ಥಾವರಲಿಂಗ ಬೇರಲ್ಲ, ಜಂಗಮಲಿಂಗ ಬೇರಲ್ಲ. (ಸ್ಥಾವರಂ ಜಂಗಮಂಚೈವ ಲಿಂಗಂ ದ್ವಿವಿಧಮುಚ್ಯತೇ) ಎಂಬ ತತ್ತ್ವ ನಿರೂಪಿತವಾಗಿದೆ.

**ಮೂ**ರನೆಯ ಪವಾಡದಲ್ಲಿ – ಹಸಿದ ಜಂಗಮಕ್ಕೆ ಭಕ್ತಿಭಾವ ಭೃತ್ಯಭಾವದಿಂದ ನೀಡುವ ತಂಗಳನ್ನವೇ ದಿವ್ಯಾನ್ನ ದಿವ್ಯಪ್ರಸಾದ ವಾಗುತ್ತದೆ – ಎಂಬ ತತ್ತ್ವವಡಗಿದೆ.

★

*(೨ನೇ ಪುಟದಿಂದ ಮುಂದುವರೆದಿದೆ)*

**ಅ**ವರು ಸಂಪಾದಿಸಿ (ಶ್ರೀ ಟಿ.ಆರ್. ಮಹಾದೇವಯ್ಯರೊಡನೆ) ಪ್ರಕಟಿಸಿದ ಅಭಿನಂದನ ಸಾರ್ವಭೌಮಗ್ರಂಥ 'ಸಿದ್ಧಗಂಗಾಶ್ರೀ' ಅಭಿನಂದನಗ್ರಂಥ ಶೀರ್ಷಿಕೆಯಲ್ಲಿ ಶಿಖರ ಸದೃಶವಾದುದು. ಅದರ ಒಂದು ಗೌರವ ಪ್ರತಿಯನ್ನು ಡಾ. ಹಾ.ಮಾ. ನಾಯಕರಿಗೆ ಕೊಟ್ಟಾಗ – ''ಎರೇಸೀಮೆಯವರೇ ಈ ಗ್ರಂಥದ ಜೊತೆಗೆ ಒಂದು ವ್ಯಾಸಪೀಠ''ವನ್ನೂ ಕೊಟ್ಟಿದ್ದರೆ ಚೆನ್ನಾಗಿತ್ತು'' ಎಂದರೆಂದು ಚೆನ್ನಪ್ಪನವರು ಹೇಳಿದ್ದುದು ನೆನಪು. ಅಷ್ಟೊಂದು ಬೃಹತ್‌ಗ್ರಂಥ. ೧೧೦೦ ಪುಟಗಳಿಗೂ ಹೆಚ್ಚಿನ ಗ್ರಂಥವಿದು. ೧೯೮೨ರಲ್ಲಿ ನಡೆದ ಶ್ರೀ ಶ್ರೀಗಳವರ ವಜ್ರಮಹೋತ್ಸವ ಸಂದರ್ಭದಲ್ಲಿ ಅರ್ಪಿಸಿದ 'ದಾಸೋಹಸಿರಿ' ಅಭಿನಂದನ ಕೃತಿಯ ಸಂಪಾದಕತ್ವ (ಹೆಚ್.ವಿ. ವೀರಭದ್ರಯ್ಯ, ಬಿ. ವೀರಭದ್ರಯ್ಯ, ಟಿ.ಆರ್. ಮಹಾದೇವಯ್ಯರೊಡಗೂಡಿ)ವನ್ನೂ ನಿರ್ವಹಿಸಿದ ನಮ್ರತೆ ಎರೇಸೀಮೆಯವರಿಗೇ ಸಲ್ಲುವಂಥದು. ಇರುಳನ್ನು ಹಗಲು ಮಾಡಿ, ಮುದ್ರಣಾಲಯವನ್ನೇ ಮನೆಯನ್ನಾಗಿಮಾಡಿ ಶ್ರಮಿಸಿದ 'ಸಾಹಸಭೀಮ'ರು. ೧೯೬೬ರಿಂದ ಶ್ರೀಮಠದ ಮುಖವಾಣಿಯಾದ 'ಸಿದ್ಧಗಂಗಾ' ಮಾಸಿಕವನ್ನು ಸಂಪಾದಕರಾಗಿ, ಪ್ರಧಾನ ಸಂಪಾದಕರಾಗಿ ಕೊನೆಯುಸಿರಿನತನಕ ಮುನ್ನಡೆಸಿದ ಮಮಕಾರಶುದ್ಧರು. ''ರೀ ಆರಾಧ್ಯರೇ (ಶ್ರೀ ರೇಣುಕಾರಾಧ್ಯರು) ನಿಮಗೊಂದು ಮಾತು ಹೇಳುತ್ತೇನೆ. ಪತ್ರಿಕೆ ನಡೆಸುವುದೆಂದರೆ ಸುಲಭದ ಮಾತಲ್ಲ. ಇವರೆಲ್ಲ ಮಾತಾಡಿದ್ದಂಗಲ್ಲ. ಅದಕ್ಕೆ ಎಂಟೆದೆಬೇಕು. ಪರಮಪೂಜ್ಯರ ಸಂಕಲ್ಪವಿರುವುದರಿಂದ ಪತ್ರಿಕೆ ನಡೆಯುತ್ತಿದೆ. ಯಾರ್ರೀ ಇವತ್ತು ಶ್ರಮವಹಿಸೋರು? ಎಂದೆನ್ನುತ್ತಿದ್ದ ಚೆನ್ನಪ್ಪನವರ ಮಾತುಗಳ ಹಿಂದಿರುವ ಭಕ್ತಿಯನ್ನು, ಕಳಕಳಿಯನ್ನು ನೆನೆದರೆ ಹೃದಯತುಂಬಿಬರುತ್ತದೆ. ಪರಮಗುರು 'ಶ್ರೀ ಉದ್ದಾನೇಶ್ವರ ಚರಿತೆ'ಯನ್ನು ಷಟ್ಪದಿಯಲ್ಲಿ ಶಬ್ದಶಿಲ್ಪವನ್ನಾಗಿಸಿದ ರೂವಾರಿಗಳು.

**ಮೂ**ರು ಗಂಡು, ನಾಲ್ಕು ಹೆಣ್ಣು ಮಕ್ಕಳ ಪ್ರೀತಿಯ ತಂದೆ. ಇಬ್ಬರು ಸತಿಯರನ್ನು ಬಾಳಪಥದಲ್ಲಿ ನಡೆಸಿದ ಸದ್ಗೃಹಸ್ಥರು, ಐವರು ಸಹೋದರರು, ಮೂವರು ಸಹೋದರಿಯರ ಸೌಧರ್ಮಿಕೆಯ ಸಿರಿಯನ್ನುಂಡ ಸಿರಿ ಎರೇಸೀಮೆಯವರು ಈಗ ಕೇವಲ ''ನೆನಪಿನ ಸಿರಿ'' ಎಂಬುದೊಂದು ನೆನೆದಲ್ಲಿ ಮೂಡುವ ಶಾಂತಬೆಳಕು.

**ಪಂ**ಡಿತ ಚೆನ್ನಪ್ಪ ಎರೇಸೀಮೆಯವರ ಅಗಲಿಕೆಯಿಂದ ತುಂಬಲಾದರ ನಷ್ಟ 'ಸಿದ್ಧಗಂಗಾ' ಮಾಸಿಕದ ಬಳಗಕ್ಕೆ, ಹಳೆಯ ವಿದ್ಯಾರ್ಥಿಸಂಘಕ್ಕೆ, ಶ್ರೀಮಠದ ಭಕ್ತ ಸಮುದಾಯಕ್ಕೆ, ನಾಡಿನ ಸಾರಸ್ವತ, ಸಾಂಸ್ಕೃತಿಕ ಲೋಕಕ್ಕೆ ಆಗಿದೆ ಎಂಬುದು ಔಪಚಾರಿಕವಾದುದಲ್ಲ. ವಾಸ್ತವಿಕಕ್ಕೆ ಹಿಡಿದ ಕನ್ನಡಿ.

**ಶ್ರೀ**ಯುತರ ಆತ್ಮಕ್ಕೆ ಚಿರಶಾಂತಿಯನ್ನು ದಯಪಾಲಿಸಲೆಂದು ಬಸವಾದಿ ಶರಣರನ್ನು, ಶ್ರೀ ಸಿದ್ಧಗಂಗಾ ಗುರುಪರಂಪರೆಯನ್ನು 'ಸಿದ್ಧಗಂಗಾ' ಪ್ರಾರ್ಥಿಸುತ್ತದೆ.

– ಸಂಪಾದಕ



# ಜಾತೀಯತೆ : ಒಂದು ಚಿಂತನೆ

– ಕವಿತಾಕೃಷ್ಣ
ಸಾಹಿತಿಗಳು.
ಕ್ಯಾತಸಂದ್ರ, ತುಮಕೂರು.

ಭಾರತ ಒಂದು ಪ್ರಜಾಪ್ರಭುತ್ವದ ತತ್ವ ಮೈಗೂಡಿಸಿ ಕೊಂಡ ಬೃಹತ್‌ರಾಷ್ಟ್ರ. ಈ ರಾಷ್ಟ್ರದ ಪ್ರಬಲ ಹಾಗೂ ಮೊದಲ ವೈರಿ ಯಾರು? ಪಾಕಿಸ್ತಾನವೆ? ಬಾಂಗ್ಲದೇಶವೆ? ಇಲ್ಲಾ ಚೀನಾವೆ? ಇವುಗಳಲ್ಲಿ ಒಂದಕ್ಕೆ 'ಹುಂ' ಎಂದರೆ ಉತ್ತರ ತಪ್ಪಾಗುತ್ತದೆ. ಕಾರಣ ಇವರಾರೂ ನಮ್ಮ ರಾಷ್ಟ್ರದ ಶಾಶ್ವತ ಶತೃಗಳಲ್ಲ, ಇವರು ಒಮ್ಮೆ ಪರಮವೈರಿಗಳಾದರೆ ಮತ್ತೊಮ್ಮೆ ಪರಮಮಿತ್ರರಾಗುತ್ತಾರೆ. ಹಾಗಾದರೆ ಈ ರಾಷ್ಟ್ರದ ನಿಜವಾದ ವೈರಿಯಾರು? 'ಜಾತಿಯತೆ'ಯೇ ಈ ಬಲಿಷ್ಠ ಭಾರತದ ಪ್ರಪ್ರಥಮ ವೈರಿ; ನಿಜ! ಸುಧೀರ್ಘವಾಗಿ ಚಿಂತಿಸಿ ನೋಡಿದಾಗ ಈ ಜಾತೀಯತೆ ನಮ್ಮ ಭಾರತಕ್ಕೆ ಅಂಟಿದ ಭಯಾನಕ ಪಿಡುಗಾಗಿದೆ. ರಾಷ್ಟ್ರದ ಜೀವಸತ್ವವನ್ನು ಬೆಳೆಯ ಗೊಡದಂತ ದುಸ್ಥಿಗೆ ತಂದಿದೆ.

ಭಾರತ ಒಂದು ಪುಟ್ಟ ವಿಶ್ವವಾಗಿದೆ. ಇಲ್ಲಿ ಹತ್ತು ಹಲವು ವೈಶಿಷ್ಟ್ಯಗಳುಂಟು. ನಾನಾಧರ್ಮಗಳು, ಹಲವಾರು ಪಂಥಗಳು, ಅಸಂಖ್ಯಾತ ಜಾತಿಗಳು. ಹಾಗೆಯೇ ವಿವಿಧ ಬಗೆಯ ಆಚರಣೆಗಳು, ಅನೇಕಾನೇಕ ಸಂಸ್ಕೃತಿಗಳು, ಬಗೆಬಗೆಯ ಉಡುಗೆ ತೊಡುಗೆಗಳು. ಗುಡಿ-ಮಸೀದಿ-ಚರ್ಚ್ ಗಳು. ದಿನ ನಿತ್ಯ ಹಬ್ಬಗಳು. ಹಲವು ಬಗೆಯ ಜನಪದ ಜೀವನ ವಿಧಾನ ಗಳು. ನೂರಾರು ಭಾಷೆಗಳು – ಹೀಗೆ ಅನೇಕತೆಯಲ್ಲೂ ಏಕತೆ ಯನ್ನು ಕಾಣುವ ರಾಷ್ಟ್ರವಾಗಿತ್ತು. ಸ್ವಾತಂತ್ರ್ಯ ಪೂರ್ವದಲ್ಲಿ ಎಲ್ಲರೂ ಅಚ್ಚ ಭಾರತೀಯರಾಗಿದ್ದರು. ಸ್ವಚ್ಛ ಬದುಕು ನಡೆಸುತ್ತಿದ್ದರು.

ಇಂದು ಭಾರತ ಪರಿಸರ ಮಾಲಿನ್ಯದಿಂದ ಕಲುಷಿತ ವಾಗಿದೆ. ಭಾರತೀಯರ ಮೈ-ಮನಗಳೂ ಸಹ ಕಲುಷಿತ ಗೊಂಡಿವೆ. ನಿತ್ಯ ಕದನ, ಹೊಡೆದಾಟ, ಬೈದಾಟ, ಕೋವಿ ಯಿಂದ ಸಿಡಿದ ಗುಂಡು, ರಕ್ತದ ಓಕುಳಿ, ಉರುಳಿದ ಹೆಣಗಳ ಸಾಲು, ಎಲ್ಲೆಲ್ಲೂ ಚೀತ್ಕಾರ, ಕೋಲಾಹಲ, ಲಾಟಿ-ಬೂಟಿನ ಸದ್ದು, ನರಕ ಬದುಕು, ಜೀವಗಳಿಗೆ ಬಿಡುಗಾಸಿನಷ್ಟು ಬೆಲೆಯಿಲ್ಲ. ಅಳುವವರ ಕಂಬನಿ ಒರೆಸುವರಿಲ್ಲ', ಸಾಂತ್ವನ ಹೇಳುವವರು ಮೊದಲೇ ಇಲ್ಲ. ಸ್ವರ್ಗವಾಗಿದ್ದ ಭಾರತ ನರಕವಾಗಿ ಹೋಯಿತು. ಹೀಗೇಕೆ ಎಂದು ಚಿಂತಿಸಿದರೆ ಉತ್ತರ ಹೊಳೆಯದೆ ಇರದು. ಆದರೆ ಅದಕ್ಕೆ ಪರಿಹಾರ ಕಾಣದು. ಜಾತೀಯತೆಯ ದೊಡ್ಡಜಾಡ್ಯ ಧಾರ್ಮಿಕ ಕ್ಷೇತ್ರದಿಂದ ಹಿಡಿದು, ರಾಜಕೀಯ, ಶಿಕ್ಷಣ, ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಕ್ಷೇತ್ರಗಳವರೆಗೂ ಹರಡಿ ಭಾರತ ಬಡ ರಾಷ್ಟ್ರವಾಗುತ್ತಿದೆ. ಹೇಳಲಾಗದಷ್ಟು ಶೋಚನೀಯ ಸ್ಥಿತಿ ಮುಟ್ಟಿದೆ. ಜಾತೀಯತೆಯ ಮಹಾಸೋಂಕಿನಿಂದ ರಾಷ್ಟ್ರದ ಸಮಸ್ತಕ್ಷೇತ್ರಗಳು ಮುಟ್ಟಬೇಕಿದ್ದ ಗುರಿ ಮುಟ್ಟಲಾರದೆ ಸೋತು ಸೊರಗಿವೆ. ಭಾರತೀಯತೆ ಇರಲಿ; ಕಡೆಯಪಕ್ಷ ಮಾನವೀಯತೆ ಸಹ ಇಲ್ಲವಾಗಿ ಹೋಗಿದೆ.

ಜಾತ್ಯಾತೀತ ರಾಷ್ಟ್ರದಲ್ಲಿ ಜಾತೀಯತೆಯ ಪಿಡುಗು ಎಲ್ಲೆ ಮೀರಿ ಹಬ್ಬಿರುವುದು ವಿಷಾದದ ಸಂಗತಿ. 'ಸರ್ವರಿಗೂ ಸಮ ಬಾಳು', 'ಸರ್ವಜನರ ಸುಖವೇ ತನ್ನ ಸುಖ', 'ವಸುದೈವ ಕುಟುಂಬಕಂ', 'ಜಾತಿಹೀನನ ಮನೆಯ ಜ್ಯೋತಿ ತಾ ಹೀನವೆ?' 'ಸತ್ಯಂ ಶಿವಂ ಸುಂದರಂ', 'ದಯೆ ಇರಬೇಕು ಸಕಲ ಪ್ರಾಣಿಗಳೆಲ್ಲರಲು' ... ಹೀಗೆ ಅಮೂಲ್ಯ ಅನುಭಾವ ವಾಣಿಗಳನ್ನು ಉದ್ಘೋಷಿಸಿ, ಆಚರಣೆಗೆ ತಂದ ರಾಷ್ಟ್ರ ಇಂದೇನಾಗಿದೆ? ಪಾತಕಿಗಳ ಬೀಡಾಗಿದೆ. ಜಾತೀಯತೆಯ ಬೆಂಕಿ ಬಿದ್ದ ಮನೆಯಾಗಿದೆ. ಊರು, ರಾಜ್ಯ ಬದಲಿಸಿದರೆ ಬಾಣಲೆಯಿಂದ ಬೆಂಕಿಗೆ ಹಾರಿದ ಅನುಭವ!

ಜಾತೀಯತೆಯ ಸನ್ನಿಪಾತರೋಗಕ್ಕೆ ಬಲಿಯಾಗದ ಜನರೇ ಭಾರತದಲ್ಲಿಲ್ಲ ಎನ್ನಬೇಕು. ಗುಡಿ-ಮಸೀದಿ-ಚರ್ಚ್ ಗಳ ವಿಷಯದಲ್ಲಿ ಕದನ, ಧರ್ಮಧರ್ಮಗಳಲ್ಲಿ ಕದನ, ಜಾತಿ-ಜಾತಿಗಳಲ್ಲಿ ಕದನ, ಧರ್ಮದ ಒಳಗೂ ಅಂತರ್‌ಕದನ, ಮಾನವ ದಾನವನಾಗಿದ್ದಾನೆ. ಅವನ ಸ್ಥೈರತೆಗೆ ಕೊನೆಯೆ ಇಲ್ಲವಾಗಿದೆ. ಧರ್ಮ ಸಮನ್ವಯದ ಪುಣ್ಯಭೂಮಿಯಾಗಿದ್ದ ಭಾರತ, ಜಾತೀಯತೆಯ ಮೂಲಭೂತವಾದಿಗಳ ದಳ್ಳುರಿಗೆ ಸಿಕ್ಕಿ ನಲುಗುತ್ತಿದೆ. ಮಾನಹರಣ, ಪ್ರಾಣಹರಣಗಳು ಪ್ರತಿಕ್ಷಣ ನಡೆಯುತ್ತವೆ.





'ಹಳ್ಳಿಗಳು ಭಾರತದ ಬೆನ್ನೆಲುಬು' ಎಂದಿದ್ದರು ಮಹಾತ್ಮಗಾಂಧೀಜಿ, ಆದರೆ ಇಂದು ಜಾತೀಯತೆ ಭಾರತದ ಯಾವ ಹಳ್ಳಿಯನ್ನೂ ಬಿಟ್ಟಿಲ್ಲ. ಧರ್ಮಾಧಿಕಾರಿಗಳೇ ಇದರ ಪಿಡುಗಿಗೆ ಬಲಿಯಾಗಿರುವಾಗ ಇನ್ನು ಶ್ರೀಸಾಮಾನ್ಯರ ಗತಿ ಏನು? ಬುದ್ಧಿಜೀವಿಗಳೆನಿಸಿದವರು ಕೂಡ ಜಾತೀಯತೆ ಮೋಹಕ್ಕೆ ಬಲಿಯಾಗಿದ್ದಾರೆಂದ ಮೇಲೆ ಇನ್ನು ಮತಿಯುಂಟೆ? ಗತಿಯುಂಟೆ? ಒಂದು ಧರ್ಮ ಇನ್ನೊಂದು ಧರ್ಮದೊಂದಿಗೆ, ಒಂದು ಜಾತಿ ಮತ್ತೊಂದು ಜಾತಿಯೊಂದಿಗೆ ಹೋರಾಟಕ್ಕಿಳಿ ಯುವುದು, ಆಸ್ತಿ-ಪಾಸ್ತಿ ಹಾಳುಗೆಡವುವುದು, ಮಾನಹರಣ, ಪ್ರಾಣಹರಣ ಮಾಡುವುದು ಸಂವಿಧಾನ ಬಾಹಿರವಾದುದು. ಆದಾಗ್ಯೂ ಜಾತೀಯತೆ ಭಾರತದಲ್ಲಿ ಭೀಕರರೂಪ ತಾಳಿದೆ.

ಓರ್ವ ವ್ಯಕ್ತಿ ಸಂಧಿಸಿದಾಗ ಆತನ ವಿದ್ಯೆ, ಬುದ್ದಿ, ವಿವೇಕ, ಬದುಕನ್ನು ತಿಳಿಯಬಯಸುವುದಕ್ಕಿನ್ನ ಮಿಗಿಲಾಗಿ ಆತನ 'ಜಾತಿ'ಯನ್ನು ತಿಳಿಯಲು ಬಯಸುತ್ತೇವೆ. ಅದಕ್ಕಾಗಿ ಏನೆಲ್ಲ ಕಸರತ್ತನ್ನು ಮಾಡುತ್ತೇವೆ. 'ನಮ್ಮ ಜಾತಿ' ಎಂದು ತಿಳಿದರೆ ತೀರಿತು. ಗಳಸ್ಯ ಕಂಠಸ್ಯ. 'ಬೇರೆ ಜಾತಿ' ಎಂದರೆ ಮಾನವೀಯ ಸೇತು ಮುರಿದು ಬೀಳುತ್ತದೆ. ಈ ಚಿತ್ರ ಎಲ್ಲಾ ಕಚೇರಿ, ಮಠ, ಮಂದಿರಗಳಲ್ಲಿ ನಡೆದದ್ದೆ. ಈ ಜಾತೀಯತೆ ವಿಷಬೀಜವನ್ನು ಜನಮಾನಸದಲ್ಲಿ ಬಿತ್ತಿದವರಾರು? ಯಾರದೇ ತಪ್ಪಿರಲಿ, ಆದರೆ ಭಾರತೀಯರ ನಿರ್ಮಲವಾಗಿದ್ದ ಹೃದಯ ಸರೋವರ ಇಂದು ಜಾತೀಯತೆಯಿಂದ ಕಲುಷಿತವಾಗಿ ಹೋಗಿದೆ. ಹೈಟೆಕ್ ಲೋಕವನ್ನೂ ಸಹ ಇದು ಬಿಟ್ಟಿಲ್ಲ.

ಭಾರತದ ಅಧಃಪತನಕ್ಕೆ ಜಾತೀಯತೆಯೇ ಕಾರಣ ಎಂಬುದನ್ನು ಎಲ್ಲರೂ ಬಲ್ಲರು. ಅರಿತ ಮೇಲು ಮೌನ ವಹಿಸುವುದು ಸರಿಯಲ್ಲ. ಈಗಲೇ ವಿನಾಶದ ಅಂಚು ತಲುಪಿದ್ದೇವೆ. ಇನ್ನಾದರು ಎಚ್ಚರವಾಗೋಣ. ಜಾತೀಯತೆಯ ವಿಷವೃಕ್ಷವನ್ನು ಬೇರುಸಹಿತ ಕಿತ್ತು ಸುಡೋಣ. ಎದೆಯ ಹೊಲವನ್ನು ಹಸನು ಮಾಡೋಣ, ಅಲ್ಲಿ ಭಾವೈಕ್ಯತೆಯ ಬೀಜವನ್ನು ಬಿತ್ತೋಣ!

*ವೇದಗೀತೆಯನೋದಿ ಹಿಂದುವಾಗು*
*ಕುರಾನ್ ಓದಿ ಮುಸ್ಲಿಮ್ಮನಾಗು*
*ಬೈಬಲ್ ಓದಿ ಕ್ರೈಸ್ತನಾಗು*
*ನೀನು ಏನಾದರೂ ಆಗು*
*ಮೊದಲು ಮಾನವನಾಗು.*

★

ನೆಪೋಲಿನ್ ಇನ್ನೂ ಬಾಲಕ. ಮಿಲಿಟರಿ ಶಿಕ್ಷಣ ಪಡೆಯುತ್ತಾ ಇದ್ದ. ಆ ದೇಶದ ಸೇನಾಧಿಪತಿ ಬಂದರು. ವಿದ್ಯಾರ್ಥಿಗಳು ಸಾಲಾಗಿ ನಿಂತಿದ್ದಾರೆ. ಪ್ರತಿಯೊಬ್ಬರಿಗೂ 'ಏನು ಆಗಬಯ ಸುತ್ತೀ' ಎಂದು ಕೇಳುತ್ತ ಹೋದರು. ಆ ಬಾಲಕರು 'ನಾನು ಸೈನಿಕನಾಗಬಯಸುವೆ, ನಾನು ಕ್ಯಾಪ್ಟನ್ ಆಗ ಬಯಸುವೆ, ನಾನು ಜನರಲ್ ಆಗಬಯಸುವೆ' ಎಂದು ಹೇಳುತ್ತಿದ್ದರು. ಈಗ ಉಳಿದವರಿಗಿಂತ ಕುಳ್ಳ ಇದ್ದುದರಿಂದ ಕೊನೆಗೆ ನಿಂತಿದ್ದ. ಬಹಳ ಬಡ ಹುಡುಗ. ಆತನಿಗೂ ಅದೇ ಪ್ರಶ್ನೆ. ನೆಪೋಲಿಯನ್ ಹೇಳಿದ 'ನಾನು ಈ ಯೂರೋಪ್ ಖಂಡದ ಮಹಾದೊರೆಯಾಗಬೇಕು'. ಎಂಥ ಬಯಕೆ ! ಏನು ಅಭೀಪ್ಸೆ! ಆತನ ಅಣು ಅಣು ಮಹಾರಾಜನಾಗ ಬಯಸು ತ್ತಿತ್ತು. ಆ ಬಯಕೆ ಆತನ ಆಂತರಿಕ ತಪಸ್ಸು. ಅದಕ್ಕಾಗಿ ಆತ ಸಹಿಸಿದ ಅಪಾರ ಕಷ್ಟಗಳು, ಮಾಡಿದ ಸಾಧನೆ, ಬಾಹ್ಯ ತಪಸ್ಸು. ಅದು ಫಲವಿತ್ತಿತ್ತು. ಜಗತ್ತೇ ಬೆರಗುಗೊಂಡು ನೋಡಿತ್ತು. ಆತ ಕೆಲವೇ ವರುಷಗಳಲ್ಲಿ ಅಜೇಯ ಚಕ್ರಾಧಿಪತಿಯಾದ !

ನಮ್ಮಲ್ಲಿ ಈ ಬಗೆಯ ದ್ವಿವಿಧ ತಪದ ಕೊರತೆ ! ಇಲ್ಲದಿದ್ದರೆ ನಮ್ಮ ದೇಶ ಹೀಗೇಕೆ ಇರುತ್ತಿತ್ತು? ನೂರು ಕೋಟಿಗೆ ಸಮೀಪಿಸಿದ ಜನ, ವಿಶಾಲ ನಾಡು, ನಿಸರ್ಗ ಸಂಪದ, ಸಂಪೂರ್ಣ ಸ್ವಾತಂತ್ರ್ಯ, ಆದರೂ ಬಡತನ, ಕೈಯಾಸೆ, ಅಪ್ರಾಮಾಣಿಕತೆ, ವ್ಯಸನಾಧೀನತೆ, ನೈಚ್ಯಮನೋಭಾವ ! ಇದನ್ನೆಲ್ಲ ತೆಗೆದುಹಾಕಬಲ್ಲೆವು, ಭವ್ಯ ಸಮೃದ್ಧ ಸತ್ವಪೂರ್ಣ ಭಾರತ ಕಟ್ಟಬಲ್ಲೆವು, ಎಂಬ ಮಾತು ಕೂಡ ನಮಗೆ ಆಡಲು ಧೈರ್ಯವಿಲ್ಲ. ಕಾರ್ಪಣ್ಯದೋಷ ನಮ್ಮೊಳಗೆ. ಇದು ಅಭೀಪ್ಸಾ ತಪದ ಅಭಾವ. ಒಬ್ಬ ಗಾಂಧಿ. ಬಡಕಲು ದೇಹ, ಬರಿಗೈ, ಬರಿ ಮೈ. ಆದರೆ ಅದ್ಭುತ ಸಂಕಲ್ಪ ಶಕ್ತಿ! ಸತ್ಯಪ್ರೇಮದ ಸಾಮರ್ಥ್ಯ. ಒಳಗೆ ತುಂಬಿ ತುಳುಕುವ ಮಂತ್ರ ಸಾಮರ್ಥ್ಯ. ತಪಶ್ಶಕ್ತಿ! ಕೋಟಿ ಜನರನ್ನು ಆ ಮಾತು ಪ್ರೇರೇಪಿಸಿತು. ಅದರ ಫಲವಾಗಿ ಬ್ರಿಟಿಷ್ ದೊರೆ ಪಲಾಯನ ! ಅಂಥ ಒಬ್ಬ ತಪಸ್ವಿ ಇಂದಿನ ಭಾರತಕ್ಕೆ ನವಜೀವನ ನೀಡಬಲ್ಲ.

(ಲೋಕ ಸಂಗ್ರಹ)

ಮಂಡೆ ಮಾಸಿದರೆ ಮಜ್ಜನವ ಮಾಡೆಂಬರು. ಬಟ್ಟೆ ಮಾಸಿದರೆ
ಮಡಿವಳನಿಗಿಕ್ಕಂಬರು. ಮನದ ಮೈಲಿಗೆಯ ಕಳೆವಡೆ
ಕೂಡಲಚೆನ್ನಸಂಗನ ಶರಣರೊಡನೆ ಅನುಭಾವವ ಮಾಡೆಂಬರು.

\- ಚೆನ್ನಬಸವಣ್ಣ

# ನಂಬಿದೆ ಗುರುವೆ ನಂಬಿದೆ ಸ್ವಾಮಿ

– ಪ್ರೇಮಾ ಮಲ್ಲಣ್ಣ
3ನೇ ಅಡ್ಡರಸ್ತೆ, ಸೋಮೇಶ್ವರಪುರ,
ತುಮಕೂರು.

*ನಂಬಿದೆ ಗುರುವೆ ನಂಬಿದೆ, ಸ್ವಾಮಿ*
*ನಂಬಿದೆ, ಅಂಬಿಕಾರಮಣ ನೀನಂಬಿಗ ! ॥ ಪಲ್ಲವಿ ॥*

*ಹೊಳೆಯ ಬರವ ನೋಡಂಬಿಗ !*
*ಸೆಳಹು ಬಹಳ ಕಾಣಂಬಿಗ !*
*ಸುಳುಹಿನೊಳಗೆ ಬಿದ್ದೆನಂಬಿಗ !*
*ಸೆಳೆದುಕೊಳ್ಳೋ ನೀನಂಬಿಗ ! ॥ ೧ ॥*

*ಆರು ತೆರೆಯ ನೋಡಂಬಿಗ ! ಬಲು*
*ಮೀರಿ ಬರುತಲಿವೆ ಅಂಬಿಗ !*
*ಹಾರಲೊದೆದು, ಎನ್ನತಡಿಗೆ ಸೇರಿಸು, ನೀ*
*ದೂರ ಮಾಡದಿರು ಅಂಬಿಗ ! ॥ ೨ ॥*

*ತುಂಬಿದ ಹರಿಗೋಲಂಬಿಗ ! ಅದ*
*ಕ್ಕೊಂಬತ್ತು ಛಿದ್ರ ನೋಡಂಬಿಗ !*
*ಸಂಭ್ರಮವನು ನೋಡಂಬಿಗ ! ಇದ*
*ರಿಂಬ ನರಿದು ತೆಗೆಯಂಬಿಗ ! ॥ ೩ ॥*

*ಹತ್ತು ಹತ್ತು ನೋಡಂಬಿಗ !*
*ಹತ್ತಿದರ್ದೆದವರು ಅಂಬಿಗ !*
*ಮುತ್ತಿಗಾಗೊಳಗಾದೆನಂಬಿಗ, ಎನ್ನ*
*ನೆತ್ತಿಕೊಳ್ಳೋ ನೀ ನಂಬಿಗ ! ॥ ೪ ॥*

*ಸತ್ಯವೆಂಬಹುಟ್ಟಂಬಿಗ, ಸದ್*
*ಭಕ್ತಿಯೆಂಬ ಪಥವಂಬಿಗ*
*ನಿತ್ಯಮುಕ್ತ ನಮ್ಮ ಚೆನ್ನಮಲ್ಲಿಕಾರ್ಜುನನ*
*ಮುಕ್ತಿಮಂಟಪಕೊಯ್ಯೋ ಅಂಬಿಗ ! ॥ ೫ ॥*

ಅಕ್ಕಮಹಾದೇವಿ ಜಗದೊಡೆಯ ಪರಶಿವನನ್ನೇ ನಂಬಿದ್ದಾಳೆ. ಅಂಬಿಕಾರಮಣನಾದ ಆ ಮಹಾದೇವನೇ ಮುಕ್ತಿಯ ಮಾರ್ಗವನ್ನು ತೋರುವ ಪರಮಗುರು. ಅವನೇ ಭವಸಾಗರವನ್ನು ದಾಟಿಸಬಲ್ಲ ಸರ್ವಶಕ್ತ. ಅವನನ್ನು ನಂಬಿಗೆಯ ಅಂಬಿಗನೆಂದು ಸ್ತುತಿಸುತ್ತಾ ತನ್ನನ್ನು ಈ ಭವಚಕ್ರದಿಂದ ಪಾರುಮಾಡುವಂತೆ ಬೇಡುತ್ತಿದ್ದಾಳೆ.

**'ಹೊಳೆ'** ಇಲ್ಲಿ ಉಬ್ಬಿ ಉಕ್ಕುವ ಸಂಸಾರ ಸಾಗರ. 'ಸಂಸಾರ' ಆಸಕ್ತಿ, ಆಸೆ, ಆಕರ್ಷಣೆಗಳ ಕೇಂದ್ರವಾಗಿರುವಂತೆ ಕುಕೃತ್ಯಗಳ ಕೇಂದ್ರವೂ ಹೌದು. ಲೌಕಿಕ ಆಕರ್ಷಣೆಯ ಅಲೆಗಳು ನಮ್ಮನ್ನು ತಮ್ಮತ್ತ ಸೆಳೆದುಕೊಳ್ಳುತ್ತವೆ, ಭವಚಕ್ರ ಭ್ರಮಣಕ್ಕೆ ತಳ್ಳುತ್ತವೆ. ಭವದ ದುಷ್ಕರ್ಮಗಳ ಕಾರಣವಾಗಿ ಮತ್ತೆ ಮತ್ತೆ ಹುಟ್ಟುವ-ಸಾಯುವ ಪರಿಭ್ರಮಣಕ್ಕೆ ಒಳಗಾಗಿ ಜೀವ ಚೀರುತ್ತದೆ, ಚೀತ್ಕರಿಸುತ್ತದೆ. ಸಂಸಾರದ ಆಕರ್ಷಣೆ ಗಳಿಂದ ತಪ್ಪಿಸಿ ಭವಚಕ್ರದ ಸುಳಿಯಿಂದ ತನ್ನನ್ನು ಪಾರು ಮಾಡುವಂತೆ ದೇವಾಧಿದೇವನನ್ನು ಅಕ್ಕ ಪ್ರಾರ್ಥಿಸುತ್ತಾಳೆ.

**'ಆರುತೆರೆ'** ಎಂದರೆ ಅರಿಷಡ್ವರ್ಗಗಳು – ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳ ಅಲೆಗಳು. ಅವು ಅಬ್ಬರದಿಂದ, ಉಬ್ಬುಬ್ಬಿ ಏರಿಬರುತ್ತವೆ. ಮನುಷ್ಯನಲ್ಲಿನ ಸದ್ಗುಣಗಳನ್ನು ನಾಶಪಡಿಸಿ ವಿನಾಶದ ಹಾದಿಹಿಡಿಸಲು ಆರರಲ್ಲಿ ಒಂದಕ್ಕೆ ಮನಕೊಟ್ಟರೆ ಸಾಕು ! ಇನ್ನು ಆರೂ ಬಲವತ್ತರವಾದರೆ ಮನ-ಚಿತ್ತ-ಬುದ್ಧಿ-ಭಾವಗಳ ನಾಶ ಖಂಡಿತ. ಈ ಅಲೆಗಳಿಂದ ನನ್ನನ್ನು ದೂರ ಸರಿಸಿ ಬಿಡು, ಆದರೆ ನೀನು ನನ್ನನ್ನು ಕೈಬಿಡಬೇಡ. ಅಲೆಗಳಿಲ್ಲದ ಪ್ರಶಾಂತ ದಡದೆಡೆಗೆ ಒಯ್ಯಿ; ಅಂದರೆ ನಿರವಯಲಾಗಿಸು ಎಂದು ಬೇಡಿಕೊಂಡಿದ್ದಾಳೆ ಅಕ್ಕ.

**'ತುಂಬಿದ** ಹರಿಗೋಲ'ನ್ನು ಅಕ್ಕ ಶರೀರಕ್ಕೆ ಹೋಲಿಸಿದ್ದಾಳೆ. ಸಮುದ್ರದ ಮೇಲಿದ್ದಾಗ ನಾವೆಯಲ್ಲಿ ಒಂದು ರಂಧ್ರವುಂಟಾದರೆ ಸಾಕು ನೀರು ನಾವೆಯೊಳಗೆ ನುಗ್ಗಿ ನಾವೆಯನ್ನೇ ಮುಳುಗಿಸಬಹುದು. ಇನ್ನು ಒಂಬತ್ತು ರಂಧ್ರಗಳಿಂದು ನೀರು ಒಳನುಗ್ಗಿದರೆ ಒತ್ತಡ ಅಧಿಕವಾಗಿ ಬಹಳ ಬೇಗ ನಾವೆ ತಳ ಕಚ್ಚಬಹುದು. ಇದೇ ರೀತಿ ನಮ್ಮ ಶರೀರದಲ್ಲಿ ನವದ್ವಾರಗಳಿವೆ. ಕೇವಲ ವಿಷಯ ಸುಖಗಳಿಗೆ ಜೀವನದ ಸುದೀರ್ಘ ಹಾದಿಯಲ್ಲಿ ಮಾನವನಧು ಮುಗಿಯದ ಪಯಣ. ಅವನು ನಡೆಯಬೇಕಾದ ಹಾದಿ ಕಷ್ಟಕರ, ಹುಲ್ಲಿನ ನಯವಾದ ಮೇಲ್ಪಾಸಿಗಿಂತ ಚುಚ್ಚುವ ಮುಳ್ಳು ಕಲ್ಲುಗಳೇ ಅಧಿಕ.

**ನಾವು** ನೆಲೆಗೊಂಡಿರುವ ಸಂಸಾರವೊಂದು ಸಾಗರ ವಿದ್ದಂತೆ ಇದರ ಆಳ, ಅಗಲ, ಜಲರಾಶಿ ಅಪಾರ, ಅಲ್ಲದೆ ಕ್ರೂರ ಜಲಚರಗಳಿಂದ ಆಕ್ರಮಣದ ಭೀತಿ. ಹುಟ್ಟುಸಾವು, ಸಂಕಟ ಕಷ್ಟ, ನೋವು-ವೇದನೆ ಇವೆಲ್ಲವುಗಳಿಂದ ಪಾರಾಗ ಬೇಕಾದರೆ ಈ ಭವ ಸಾಗರವನ್ನು ದಾಟಿ ಪರಮಾತ್ಮನ ನಿಶ್ಚಲ, ನಿರ್ಭಯ, ಶಾಂತಿಯುತವಾದ ಬಯಲನ್ನು ಸೇರಬೇಕು. ಇದು ಸುಲಭಸಾಧ್ಯವಲ್ಲವಾದರೂ ಶಿವನೊಲಿಮೆಯನ್ನು ಪಡೆಯ ಬೇಕೆಂಬ ತೀವ್ರ ಬಯಕೆ ಮೂಡಬೇಕು, ಇದಕ್ಕೆ ಪೂರಕವಾಗಿ ಶ್ರದ್ಧೆ, ಭಕ್ತಿ, ವಿಶ್ವಾಸ, ಸಾಧನೆ, ಅರ್ಚನೆ, ಕೀರ್ತನೆ, ಸತ್ಸಂಗ ಮುಂತಾದವುಗಳು ಬೆಳೆಯುತ್ತ ಹೋಗಬೇಕು. ಜಗದ್‌ರಕ್ಷಕನನ್ನು ಪೂರ್ಣವಾಗಿ ನಂಬಿ ನಮ್ಮನ್ನೇ ಅವನಿಗೆ ಅರ್ಪಿಸಿ ಕೊಂಡು ಬಿಟ್ಟರೆ ನಂಬಿಗೆಯ ಅಂಬಿಗನಾಗಿ ಬಂದು ಈ ಭವಸಾಗರದಿಂದ ಮೇಲೆತ್ತಿ ಮುಕ್ತಿಯ ತಾಣಕ್ಕೆ ಕರೆದೊಯ್ಯುತ್ತಾನೆ.

**ಅಕ್ಕ**ಮಹಾದೇವಿ ತನ್ನ ರಚನೆ 'ನಂಬಿದೆ ಗುರುವೆ' ಎಂಬ ಪದದಲ್ಲಿ ಈ ಭವಸಾಗರದ ಸೆಳಹು, ಹೊಳಪು, ಆಕರ್ಷಣೆ ಗಳನ್ನು ಮಾರ್ಮಿಕವಾಗಿ ವಿವೇಚಿಸುತ್ತ, ಅದರ ಸುಳಿಯ-ಸೆಳವಿಗೆ ಸಿಕ್ಕಿ ನಾಶಗೊಳ್ಳದೆ ಎಚ್ಚೆತ್ತುಕೊಂಡು ಜಗದಂಬಿಗನ ಕರುಣೆಯ ನೆರವಿನಿಂದ ಈ ಭುವಿಯ ಯಾನವನ್ನು ಕಡೆಗೊಳಿಸಬೇಕೆಂಬ ಹಿತದನುಡಿ ನುಡಿದಿದ್ದಾಳೆ. ಪದದಲ್ಲಿ ಅಕ್ಕನದು 'ಸ್ವಗತ' ನುಡಿಯಾಗಿದ್ದರೂ ಅದು 'ನಿತ್ಯಮುಕ್ತಳಾದ' ಅವಳಿಗೆ ಅನ್ವಯಿಸದೆ ಜನನ-ಮರಣದ ಚಕ್ರಕ್ಕೆ ಸಿಲುಕಿ ತೊಳಲಿ, ಬಳಲುತ್ತಿರುವ ಜೀವಿಗಳೆಲ್ಲರನ್ನೂ ಸಂಕೇತಿಸುತ್ತದೆ.

**ಅಕ್ಕ**ನ ಈ ಹಾಡು ನಾದರಾಮಕ್ರೀ ರಾಗದಲ್ಲಿದ್ದು 'ಪಲ್ಲವಿ'ಯು ನಾಲ್ಕು-ನಾಲ್ಕು ಸಾಲಿನ ಭಾವಾಭಿವ್ಯಕ್ತಿಗೆ ಅನುಪಲ್ಲವಿಯಾಗಿ ಬಂದು ಹೆಚ್ಚಿನ ಶೋಭೆಯನ್ನು ತಂದುಕೊಟ್ಟಿದೆ. ಆ ಬಾಗಿಲುಗಳನ್ನು ತೆರೆದರೆ ಭೌತಿಕ ಸುಖದ ವಿಷ ದೇಹಕ್ಕೆಲ್ಲಾ ವ್ಯಾಪಿಸಿ ಜೀವಿತವನ್ನು ನರಕ ಸದೃಶವಾಗಿ ಮಾರ್ಪಾಡಿಸಬಲ್ಲದು. ನವದ್ವಾರಗಳನ್ನು (ನವನಾಳಗಳನ್ನು) ಹೀಗೆ ಹೆಸರಿಸುತ್ತಾರೆ – ಗಾಂಧಾರಿ, ಹಸ್ತಿ ಜಿಹ್ವಾ, ಪೂಷಾ, ಪಯಸ್ವಿನಿ, ಅಲಂಬು, ಲಕುಹ, ಶಂಖಿನಿ, ಇಡಾ ಮತ್ತು ಪಿಂಗಳ. ಇವುಗಳ ಲೌಕಿಕ ಅಬ್ಬರವನ್ನು, ಉಪಟಳವನ್ನು ತಗ್ಗಿಸಿದಾಗ ಮಾತ್ರ ಶರೀರ ಶಾಂತವಾಗುತ್ತದೆ. ಇಲ್ಲವಾದರೆ ಪಾಪಕೂಪಕ್ಕೆ ತಳ್ಳಲ್ಪಟ್ಟು ನಾಶಹೊಂದುತ್ತಾನೆ ಮಾನವ. ಈ ಬಗ್ಗೆ ನನ್ನಲ್ಲಿ ಅರಿವನ್ನುಂಟುಮಾಡಿ ಈ ಬಂಧನದಿಂದ ನನ್ನನ್ನು ಬಿಡಿಸು ಎಂದು ಮೊರೆ ಇಡುತ್ತಾಳೆ ಅಕ್ಕ.

**ಇಲ್ಲಿ** ಹೇಳಿರುವ ''ಹತ್ತು + ಹತ್ತು + ಐದು'' ಸೃಷ್ಟಿಯು ರಚನೆಗೆ ಕಾರಣವಾಗಿರುವ ತತ್ವಗಳು. ಅಕ್ಕ ಇವುಗಳನ್ನು ಗಮನಿಸುತ್ತಾ ತಾನು ಈ ಪ್ರಾಪಂಚಿಕ ಸ್ಥಿತಿಗೆ ಒಳಪಟ್ಟಿದ್ದೇನೆ ಇವುಗಳಿಂದ ತನ್ನನು ಬಿಡಿಸಿ ನಿನ್ನ ಬಳಿಗೆ ಕರೆದುಕೊ ಎಂದು ಬಿನ್ನೈಸುತ್ತಿದ್ದಾಳೆ.

**ಶರಣ**ರು ಸೃಷ್ಟಿರಚನೆಗೆ ೨೫ ತತ್ವಗಳು ಕಾರಣ ವಾಗಿರುವುದಾಗಿ ತಿಳಿಸುತ್ತಾರೆ – ಪಂಚಸಾದಾಖ್ಯಗಳು, ಪಂಚಶಕ್ತಿಗಳು, ಪಂಚಕಲೆಗಳು, ಪಂಚ ವಿಷಯಗಳು, ಪಂಚಜ್ಞಾನೇಂದ್ರಿಯಗಳು, ಪಂಚಕರ್ಮೇಂದ್ರಿಗಳು ಮತ್ತು ಪಂಚಭೂತಗಳು ಮತ್ತು ಮಾಯಾ ಶಕ್ತಿ.

**ಅಕ್ಕ**ನೂ ಈ ಸೃಷ್ಟಿಯತತ್ವದಿಂದ ಹೊರತಾಗಿಲ್ಲ, ಅವುಗಳಿಂದ ಈ ಭುವಿಯಲ್ಲಿ ಬಂಧಿತಳಾಗಿದ್ದಾಳೆ. ಈ ಬಂಧನದಿಂದ ಬಿಡುಗಡೆ ಬಯಸುತ್ತಾ ಈ ಸೃಷ್ಟಿಯ ಲೇಪವನ್ನು ಬಿಡಿಸಿ ನಿರವಯಳನ್ನಾಗಿ ಮಾಡುವಂತೆ ಬೇಡಿಕೊಳ್ಳುತ್ತಾಳೆ.

**ಈ** ಭವಸಾಗರವನ್ನು ದಾಟಬೇಕು, ಮುಕ್ತಿ ಮಂದಿರವನ್ನು ಸೇರಬೇಕೆಂಬ ಬಯಕೆ ಅಕ್ಕನದು. ಸತ್ಯವೆಂಬ ಹುಟ್ಟನ್ನು ಹಿಡಿದು ಸದ್‌ಭಕ್ತಿ ಎಂಬ ಪಥದಲ್ಲಿ ಸಾಗಿ ನಿತ್ಯಮುಕ್ತ ಚೆನ್ನಮಲ್ಲಿಕಾರ್ಜುನ ನಿಹಮುಕ್ತಿ ಮಂಟಪಕ್ಕೆ ಕರೆದೊಯ್ಯ ಬೇಕೆಂದು ಅಂಬಿಕಾರಮಣನನ್ನು ಅಕ್ಕ ಪ್ರಾರ್ಥಿಸಿಕೊಳ್ಳುತ್ತಾಳೆ.

**ಅಕ್ಕ**ಮಹಾದೇವಿ ಯಾರ ಮನೆಗೆ ಹೊರಟ್ಟಿದ್ದಾಳೋ ಆ ಮನೆಯ ಒಡೆಯನೇ ಅವಳ ಬಾಳಪಯಣದ ನಾವೆಯ ಅಂಬಿಗನಾಗಿರುವುದರಿಂದ, ನಾವೆ ಎಂದೂ ದಾರಿ ತಪ್ಪದು, ಗುರಿ ನೇರ ಮತ್ತು ನೆಲೆ ಸ್ಥಿರ. ಅಕ್ಕನ ಈ ಹಾಡು ಆಧ್ಯಾತ್ಮಪಥಿಕರಿಗೊಂದು ದಾರಿದೀಪ.

★

**ಶ್ರೀವಾಣಿ**

ಪ್ರಪಂಚದಲ್ಲಿ ಬಹಳ ಮಂದಿ ಪರಿಪೂರ್ಣ ಜೀವನದ ಅರ್ಥ ಮಾಡಿಕೊಂಡಿಲ್ಲ. ಅಪರಿಪೂರ್ಣ ಜೀವನವನ್ನೇ ಪರಿಪೂರ್ಣ ಎಂಬ ಭ್ರಮೆ, ಭ್ರಾಂತಿಯ ಜೀವನವನ್ನು ನಡೆಸುತ್ತಿದ್ದಾರೆ. ಆದ್ದರಿಂದ ಪರಿಪೂರ್ಣ ಜೀವನದ ಅರ್ಥವನ್ನು ಮಾಡಿಕೊಳ್ಳು ವುದು ಬಹಳ ಮುಖ್ಯವಾದುದು.

# ಶ್ರೀ ಸಿದ್ಧಗಂಗಾ ಪಬ್ಲಿಕ್ ಶಾಲೆಯ ವಾರ್ಷಿಕೋತ್ಸವ




ವೇದಿಕೆಯಲ್ಲಿ : ಶ್ರೀ ಶಿವಪ್ರಸಾದ್, ಶ್ರೀ ಮಾದಯ್ಯ, ಶ್ರೀ ಬಿ.ಎನ್. ಚನ್ನಪ್ಪ, ಶ್ರೀ ಎಲ್. ರೇವಣ್ಣಸಿದ್ಧಯ್ಯ, ಶ್ರೀ ಎಸ್.ಎಂ. ಶಾಂತರಾಜು, ಶ್ರೀಮತಿ ಯಶೋಧ ಬೋಪಣ್ಣ, ಶ್ರೀಮತಿ ಗಾಯತ್ರಿ ಶಿವಪ್ಪ ಮತ್ತು ಶ್ರೀಮತಿ ಬಿ. ಸುಶೀಲ ಅವರು.

ಜನವರಿ ೩ರಂದು ಬೆಂಗಳೂರಿನ ಚಂದ್ರಾಬಡಾವಣೆಯಲ್ಲಿರುವ ಶ್ರೀ ಸಿದ್ಧಗಂಗಾ ಪಬ್ಲಿಕ್ ಶಾಲೆಯ ವಾರ್ಷಿಕೋತ್ಸವ ಸಮಾರಂಭ ಸಂಭ್ರಮದಿಂದ ನಡೆಯಿತು.

ಶಾಲೆಯ ಶಿಕ್ಷಕರಾದ ಶ್ರೀಮತಿ ಪ್ರಭಾರವರ ಪ್ರಾರ್ಥನೆಯೊಂದಿಗೆ ಆರಂಭಗೊಂಡ ಕಾರ್ಯಕ್ರಮಕ್ಕೆ ಮಹಾನಗರ ಪಾಲಿಕೆಯಲ್ಲಿ ಡಿಡಿಪಿಐ ಶ್ರೀ ಎಸ್.ಎಂ. ಶಾಂತರಾಜು, ಬೆಂಗಳೂರಿನ ದಕ್ಷಿಣ ವಲಯದ ಬಿಇಓ ಆಗಿರುವ ಶ್ರೀಮತಿ ಯಶೋದ ಬೋಪಣ್ಣ ಮತ್ತು ಬೆಂಗಳೂರು ಮಹಾನಗರ ಪಾಲಿಕೆಯ ಕಾರ್ಪೋರೇಟರ್ ಶ್ರೀಮತಿ ಗಾಯತ್ರಿ ಶಿವಪ್ಪ ಅವರು ಆಗಮಿಸಿದ್ದರು.

ಸಿದ್ಧಗಂಗಾ ಪಬ್ಲಿಕ್ ಶಾಲೆಯ ಖಜಾಂಚಿಗಳೂ ಹಾಗೂ ಹಿರಿಯ ಶಿಕ್ಷಕರೂ ಆದ ಶ್ರೀ ಬಿ. ಸಿದ್ಧಲಿಂಗಯ್ಯನವರು ಗಣ್ಯರನ್ನು ಸ್ವಾಗತಿಸಿದರು.

ಶಾಲೆಯ ಪ್ರಾಂಶುಪಾಲರಾದ ಶ್ರೀಮತಿ ಬಿ. ಸುಶೀಲರವರು ಪ್ರಸ್ತುತ ಸಾಲಿನ ''ಶೈಕ್ಷಣಿಕ ವರದಿ''ಯನ್ನು ಸಭೆಗೆ ಪರಿಚಯ ಮಾಡಿಕೊಡುತ್ತಾ ಕೇವಲ ೨ ವರ್ಷಗಳಲ್ಲಿ ಶಾಲೆ ಪ್ರಗತಿಯತ್ತ ದಿಟ್ಟ ಹೆಜ್ಜೆಯನ್ನಿಡುತ್ತಿರುವುದಕ್ಕೆ ಹರ್ಷವನ್ನು ವ್ಯಕ್ತಪಡಿಸಿ ಇದಕ್ಕೆ ಕಾರಣರಾದ ಶಾಲೆಯ ಆಡಳಿತ ಮಂಡಲಿ ಮತ್ತು ಶಿಕ್ಷಕ ವೃಂದವನ್ನು ಅಭಿನಂದಿಸಿದರು.

ಭವಿಷ್ಯದ ಯೋಜನೆಗಳ ಬಗ್ಗೆ ವಿವರಗಳನ್ನು ತಿಳಿಸಿದ ಶ್ರೀಮತಿ ಬಿ. ಸುಶೀಲ ಅವರು ಅದಕ್ಕಾಗಿ ಶಿಕ್ಷಕ ಮತ್ತು ಶಿಕ್ಷಕೇತರ ವರ್ಗವನ್ನು ಒಳಗೊಂಡಂತೆ ಸರ್ವರೂ ಕಂಕಣ ಬದ್ಧರಾಗಿರುವುದಾಗಿ ತಿಳಿಸಿದರು.

ಈ ಸಂದರ್ಭದಲ್ಲಿ ಶಾಲೆಯು ಆಯೋಜಿಸಿದ್ದ ''ವಿಜ್ಞಾನ ಮತ್ತು ಕಲಾ ಮೇಳ''ದಲ್ಲಿ ಮತ್ತು ವಿವಿಧ ಸಾಂಸ್ಕೃತಿಕ ಮತ್ತು



ಸಭೆ-ಸಮಾರಂಭ



ಮಕ್ಕಳಿಂದ ಸಾಂಸ್ಕೃತಿಕ ಕಾರ್ಯಕ್ರಮ

ಕ್ರೀಡಾ ಸ್ಪರ್ಧೆಗಳಲ್ಲಿ ವಿಜೇತರಾದವರಿಗೆ ಗಣ್ಯರು ಬಹುಮಾನಗಳನ್ನು ವಿತರಿಸಿದರು.

ಪ್ರಸ್ತುತ ಸಾಲಿನಲ್ಲಿ ಪ್ರತಿಶತ ಹಾಜರಾತಿ ಗಳಿಸಿದ ಮಕ್ಕಳಿಗೆ ಪ್ರೋತ್ಸಾಹಕರ ಬಹುಮಾನ ವಿತರಿಸಲಾಯಿತು. ಈ ಶೈಕ್ಷಣಿಕ ವರ್ಷದ ಹತ್ತನೇ ತರಗತಿಯಲ್ಲಿ ಎಲ್ಲ ನಿಟ್ಟಿನಲ್ಲೂ ಪ್ರತಿಭೆಯನ್ನು ತೋರಿಸಿದ ವಿದ್ಯಾರ್ಥಿಗಳಿಗೆ ''ಉತ್ತಮ ವಿದ್ಯಾರ್ಥಿ'' ಪ್ರಶಸ್ತಿಯನ್ನು ಚಿ. ನಯಾಜ್ ಪಾಷಾಗೆ ಮತ್ತು ''ಉತ್ತಮ ವಿದ್ಯಾರ್ಥಿನಿ'' ಪ್ರಶಸ್ತಿಯನ್ನು ಕು. ಎಚ್.ಎನ್. ಗಂಗಾಂಬಿಕೆಗೆ ಶ್ರೀ ಎಲ್. ರೇವಣ್ಣಸಿದ್ಧಯ್ಯನವರು ವಿತರಿಸಿದರು.

ಮುಖ್ಯ ಅತಿಥಿಗಳಾದ ಶ್ರೀಮತಿ ಯಶೋದ ಬೋಪಣ್ಣರವರು ಮಾತನಾಡಿ 'ಶಾಲೆಯಲ್ಲಿ ಜ್ಞಾನಾರ್ಜನೆಯ ಜೊತೆಗೆ ಮಾನವೀಯ ಮೌಲ್ಯಗಳಿಗೆ ಹೆಚ್ಚು ಪ್ರಾಧ್ಯಾನ್ಯತೆ ನೀಡಬೇಕೆಂದು' ಕರೆನಿಡಿದರು. 'ಮಕ್ಕಳಲ್ಲಿರುವ ಸುಪ್ತ ಪ್ರತಿಭೆಯನ್ನು ಬೆಳಕಿಗೆ ತರಲು ಈ ಶಾಲೆ ಅಮೂಲ್ಯ ಕೊಡುಗೆಯನ್ನು ನೀಡುತ್ತದೆ' ಎಂದು ಶಾಲೆಯ ಪ್ರಗತಿಯ ಬಗ್ಗೆ ಶ್ಲಾಘಿಸಿದರು.

ಸಂಸ್ಥೆಯ ಕಾರ್ಯದರ್ಶಿಗಳು ಹಾಗೂ ನಿವೃತ್ತ ಮುಖ್ಯ ಅಭಿಯಂತರರೂ ಆದ ಶ್ರೀ ಬಿ.ಎನ್. ಚನ್ನಪ್ಪನವರು ಮತ್ತು ಶ್ರೀ ವಿ.ಜಿ. ಹಿರೇಮಠ್‌ರವರೂ ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು.

ನಂತರ ನಡೆದ ವೈವಿಧ್ಯಮಯ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಮೊದಲಿಗೆ ಕುಮಾರಿ ಶೀಲಾರವರಿಂದ ''ವಕ್ರತುಂಡ ಮಹಾಕಾಯ''ನಾದ ವಿನಾಯಕನ ಪ್ರಾರ್ಥನೆ ಮತ್ತು ''ನೀನ್ಯಾಕೊ ನಿನ್ನ ಹಂಗ್ಯಾಕೋ'' ಎಂಬ ಹಾಡಿನ ಹಿನ್ನಲೆಯಲ್ಲಿ ನಡೆದ ಭರತನಾಟ್ಯ ಪ್ರೇಕ್ಷಕರ ಗಮನವನ್ನು ಸೆಳೆಯಿತು.

ಪುಟ್ಟ ಪುಟ್ಟ ಹೆಜ್ಜೆ ಇಟ್ಟು ಬಂದ ಮಕ್ಕಳ ''ಛದ್ಮವೇಷ ದರ್ಶನ''ವಂತೂ ಎಲ್ಲರ ಮನಸ್ಸನ್ನು ಸೂರೆಗೊಂಡಿತು. ಇದಲ್ಲದೆ ವಿವಿಧ ಕಾರ್ಯಕ್ರಮಗಳು ನಡೆದುವು ವಿದ್ಯಾರ್ಥಿಗಳಲ್ಲಿ ಸುಪ್ತ ಪ್ರತಿಭೆಯನ್ನು ಹೊರಹೊಮ್ಮಲು ಒಂದು ಸೂಕ್ತ ವೇದಿಕೆಯನ್ನು ಒದಗಿಸಿದ ಶಾಲಾ ಸಿಬ್ಬಂದಿ ವರ್ಗದವರು ಪೋಷಕರ ಮೆಚ್ಚುಗೆಗೆ ಪಾತ್ರರಾದರು.

## ವಿಜ್ಞಾನ ಮತ್ತು ಕಲಾ ಮೇಳ

ದಿನಾಂಕ ೩.೧.೨೦೦೪ರಂದು ಒಮ್ಮೆಲೆ ಅಚ್ಚರಿಯೊಂದು ಕಾದಿತ್ತು. ಪ್ರಪಂಚದ ಅದ್ಭುತಗಳು. ಗ್ರೇಟ್‌ವಾಲ್ ಆಫ್ ಚೈನಾ, ತಾಜ್‌ಮಹಲ್, ಈಜಿಪ್ಟಿನ ಪಿರಮಿಡ್, ನಿತ್ಯ ಹರಿದ್ವರ್ಣದ ಕಾಡು, ವನ್ಯ ಮೃಗಗಳ ಬೀಡು, ಯುಟಿಲಿಟಿ ಬಿಲ್ಡಿಂಗ್‌ನಿಂದ ಕಂಗೊಳಿಸುವ ನಗರ ಒಂದೆಡೆಯಾದರೆ, ಹಸು ಕರುಗಳು ಹಚ್ಚ ಹಸಿರಿನಿಂದ ಸಮೃದ್ಧಗೊಂಡ ಹಳ್ಳಿ ಇನ್ನೊಂದೆಡೆ. ದೇಗುಲ, ಕ್ರೈಸ್ತ ಮಂದಿರ ಇವುಗಳ ಜೊತೆಗೆ ವಿನೂತನ ಮನೆಗಳು, ಕಾರ್ಖಾನೆಗಳು, ಪ್ರಾಣಿ ಪಕ್ಷಿಗಳು. ಇಷ್ಟೇ ಅಲ್ಲದೆ ಮಾನವನ ಜೀರ್ಣಾಂಗವ್ಯೂಹ, ವಿವಿಧ ಅಂಗಗಳು, ಹಲವು ಬಗೆಯ ಹೂಗಳು, ತರಕಾರಿ ಹಣ್ಣು ಹಂಪಲುಗಳು ತರಕಾರಿಯಲ್ಲಿ ಮೈದಾಳಿ ನಿಂತ ಹಾವು, ಮೊಸಳೆ, ಹೂಗುಚ್ಛಗಳು, ಇವೆಲ್ಲ ಒಂದೇ ಸೂರಿನಡಿ ಪ್ರತ್ಯಕ್ಷವಾಗಿ ಕಾಣತೊಡಗಿದವು. ಭೂಮಿಯ ಮೇಲೊಂದು ಭೂಮಿ, ಸೌರಮಂಡಲ ನೋಡುಗರ ಕಂಗಳಿಗೆ ಹಬ್ಬವನ್ನುಂಟುಮಾಡಿದವು.

ಸಿದ್ಧಗಂಗಾ ಪಬ್ಲಿಕ್ ಶಾಲೆಯಲ್ಲಿ ವಿದ್ಯಾರ್ಥಿಗಳಿಂದ ಆಯೋಜಿಸಲಾಗಿದ್ದ ಈ ''ವಿಜ್ಞಾನ ಕಲಾ ಮೇಳ'' ಕಲಾಪ್ರಿಯ



ಸೌರಮಂಡಲದ ಬಗ್ಗೆ ಮಕ್ಕಳಿಂದ ಆಸಕ್ತಿಯಿಂದ ವಿವರಣೆ ಕೇಳುತ್ತಿರುವ ಶಾಲೆಯ ಅಧ್ಯಕ್ಷರಾದ ಶ್ರೀ ಎಲ್. ರೇವಣ್ಣಸಿದ್ದಯ್ಯ, ಪ್ರಾಂಶುಪಾಲರಾದ ಶ್ರೀಮತಿ ಬಿ. ಸುಶೀಲಮ್ಮ ಹಾಗೂ ಗಣ್ಯರು



ವಿಜ್ಞಾನ ಮತ್ತು ಕಲಾಮೇಳದಲ್ಲಿ ಪ್ರದರ್ಶನಗೊಂಡ ಮಾನವನ ವಿವಿಧ ಅಂಗಗಳು – ಒಂದು ನೋಟ

ರನ್ನು ''ಕೈಮುಗಿದು ಒಳಗೆ ಬಾ ದರ್ಶಕನೆ, ಶಿಲೆಯಲ್ಲವೀ ಶಾಲೆ ಕಲೆಯ ಬಲೆಯು'' ಎಂದು ಕೈಬೀಸಿ ಕರೆಯುವಂತಿತ್ತು.

''ವಿಜ್ಞಾನ ಕಲಾ ಮೇಳ''ದ ಉದ್ಘಾಟನಾ ಸಮಾರಂಭದಲ್ಲಿ ಪ್ರದರ್ಶನವನ್ನು ಉದ್ಘಾಟಿಸಿದ ಕರ್ನಾಟಕ ಕ್ರೀಡಾ ಮಂಡಲಿಯ ಉಪಾಧ್ಯಕ್ಷರು ಮತ್ತು ಮಾಜಿ ನಗರಸಭಾ ಸದಸ್ಯರೂ ಆದ ಶ್ರೀ ಎಂ.ಬಿ. ಶಿವಪ್ಪನವರು ಮಕ್ಕಳನ್ನು ಕುರಿತು ಮೆಚ್ಚುಗೆ ಮಾತುಗಳನ್ನು ಆಡಿದರು. ''ಚಿಕ್ಕ ಚಿಕ್ಕ ಮಕ್ಕಳೂ ಕೂಡ ಪರಿಸರ ಮಾಲಿನ್ಯ, ವಿದ್ಯುದುತ್ಪಾದನೆ, ನೀರಿನ ಆಗರಗಳ ಬಗೆಗೆ ವಿವರಿಸುತ್ತಾರೆಂದರೆ, ಆ ಬಗ್ಗೆ ಅವರಿಗೆ ಅರಿವಿದೆ ಎಂಬುದು ತಿಳಿದುಬರುತ್ತದೆ. ಇಷ್ಟರಮಟ್ಟಿಗೆ ಮಕ್ಕಳನ್ನು ತಯಾರಿಸುವಲ್ಲಿ ಶಿಕ್ಷಕರೂ, ಪೋಷಕರೂ ಸೇರಿ ಇಡೀ ಸಮಾಜ ವಿದ್ಯಾವಂತ ಸಮಾಜವೆನಿಸುತ್ತದೆ. ಇಂತಹ ಪ್ರದರ್ಶನಗಳು ಮಕ್ಕಳ ವೈಜ್ಞಾನಿಕ ಅರಿವನ್ನು ಹೆಚ್ಚಿಸುತ್ತವೆ'' ಎಂದು ಪ್ರಶಂಶಿಸಿದರು.

ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದ ಬಸವನಗುಡಿ ನ್ಯಾಷನಲ್ ಕಾಲೇಜಿನ ಪ್ರಾಧ್ಯಾಪಕರಾದ ಶ್ರೀ ಜಿ.ಕೆ. ಶಿವಪ್ರಕಾಶ್ ಮಾತನಾಡಿ ''ಪ್ರದರ್ಶನದ ಮುಖ್ಯ ಉದ್ದೇಶ ಮಕ್ಕಳಲ್ಲಿ ಯೋಚನಾ ಸಾಮರ್ಥ್ಯ ಮತ್ತು ವಿವರಣಾ ಸಾಮರ್ಥ್ಯವನ್ನು ಹೆಚ್ಚಿಸುವುದಾಗಿದೆ. ಮತ್ತು ತರಗತಿ ಶಿಕ್ಷಣವನ್ನು ಯಶಸ್ವಿಗೊಳಿಸುವ ಮುಖ್ಯ ಅಂಗವಾಗಿದೆ ಇಂಥ ಕಾರ್ಯಕ್ರಮಗಳು ರಾಜ್ಯದಾದ್ಯಂತ ನಡೆಯಬೇಕೆಂಬ'' ಆಶಯ ವ್ಯಕ್ತಪಡಿಸಿದರು.

ಶಾಲೆಯ ವಿಶಾಲ ವೀಕ್ಷಣಾಲಯವನ್ನೊಳಗೊಂಡಂತೆ ಇತರ ೩ ಕೋಣೆಗಳಲ್ಲಿ ಆಯೋಜಿಸಲಾಗಿದ್ದ ಈ ಕಾರ್ಯಕ್ರಮಕ್ಕೆ ಸುತ್ತುಮುತ್ತಲಿನ ಶಾಲೆಗಳ ವಿದ್ಯಾರ್ಥಿಗಳು ಭಾಗವಹಿಸಿ ಇದರ ಪ್ರಯೋಜನವನ್ನು ಪಡೆದುಕೊಂಡರು. ಪೋಷಕರು ಈ ಪ್ರದರ್ಶನವನ್ನು ವೀಕ್ಷಿಸಿ ಮಕ್ಕಳ ಆಸಕ್ತಿಯನ್ನೂ, ಶಿಕ್ಷಕರ ಶ್ರಮವನ್ನೂ ಶ್ಲಾಘಿಸಿದರು.

ವರದಿ : ಟಿ.ಸಿ. ಸುಧಾಮಣಿ

**ಶ್ರೀವಾಣಿ**

ಶಾಸನಗಳು ಪ್ರಜೆಗಳ ಬದುಕಿಗೆ ರಕ್ಷಣೆಯ ಬೇಲಿಯಾಗಬೇಕೇ ಹೊರತು, ಭಕ್ಷಣೆಯ ಮಾಳಿಗೆಯಾಗಬಾರದು.





## ಬೆಂಗಳೂರಿನಲ್ಲಿ
## ಶ್ರೀ ಸಿದ್ಧೇಶ್ವರ ಸ್ವಾಮಿಗಳ ಆಧ್ಯಾತ್ಮಿಕ ಪ್ರವಚನ ಸಮಾರೋಪ

''ಕಳೆದ ೩ ವರ್ಷಗಳಿಂದ ಬರಗಾಲ ಬಂದು ಜನ ತತ್ತರಿಸುತ್ತಿದ್ದಾರೆ. ಕುಡಿಯುವ ನೀರಿಗೂ ತೊಂದರೆಯಾಗಿದೆ. ಆದರೂ ಮಾನವೀಯ ಗುಣಗಳು ನಮ್ಮಿಂದ ದೂರವಾಗಬಾರದು'' ಎಂದು ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ತಮ್ಮ ಅನುಗ್ರಹ ನುಡಿಗಳಲ್ಲಿ ತಿಳಿಸಿದರು.

ಪೂಜ್ಯ ಶ್ರೀಗಳವರು ಬೆಂಗಳೂರಿನಲ್ಲಿ ಡಿಸೆಂಬರ್ ೩೦ರಂದು ನಡೆದ ಶ್ರೀ ಸಿದ್ಧೇಶ್ವರ ಸ್ವಾಮಿಗಳವರ ಒಂದು ತಿಂಗಳ ಆಧ್ಯಾತ್ಮಿಕ ಪ್ರವಚನ ಕಾರ್ಯಕ್ರಮ ಮುಕ್ತಾಯ ಸಮಾರಂಭದ ದಿವ್ಯ ಸಾನ್ನಿಧ್ಯ ವಹಿಸಿ ಆಶೀರ್ವಚನ ನೀಡಿದರು.

ಪೂಜ್ಯ ಶ್ರೀ ಶ್ರೀಗಳವರು ಜನರಲ್ಲಿ ಪ್ರೀತಿ ವಿಶ್ವಾಸ ಬೆಳೆಸುವ ಕೆಲಸವನ್ನು ಜಗತ್ತಿಗೆ ಭಾರತ ಹೇಳಿಕೊಡಬೇಕು. ಇರಾನ್‌ನಲ್ಲಿ ಸಂಭವಿಸಿದ ಭೂಕಂಪದಿಂದ ಮನಸ್ಸು ಮುದುಡಿ ಹೋಗಿದೆ. ಸಾವಿರಾರು ಜನ ಸಾವು, ನೋವು ಕಂಡಿದ್ದಾರೆ. ಅವರಿಗಾಗಿ ಇಡೀ ಲೋಕವೇ ಪರಿತಪಿಸುತ್ತದೆ. ಬೇರೆಯವರ ನೋವಿಗೆ ಸ್ಪಂದಿಸುವುದೇ ಮಾನ ಧರ್ಮ'' ಎಂದರು.

''ವಿಶ್ವದಲ್ಲಿ ಶಾಂತಿ, ನೆಮ್ಮದಿ ನೆಲಸುವಂತಾಗುವಲ್ಲಿ ಭಾರತೀಯರ ಜವಾಬ್ದಾರಿ ಹೆಚ್ಚಿದೆ. ಈ ಕರ್ತವ್ಯದಲ್ಲಿ ಭಾರತೀಯರು ಮುಂದಾಗಬೇಕು. ಅಂತಹ ವಿಶೇಷಶಕ್ತಿ ನಮ್ಮಲ್ಲಿದೆ. ಅದನ್ನು ಅರವಿಂದ ಘೋಷರು ವಿಸ್ತೃತವಾಗಿ ವಿವರಿಸಿದ್ದರು'' ಎಂದರು. ನಮ್ಮ ಸಂಸ್ಕೃತಿಯ ಸ್ವರೂಪ ಆಧ್ಯಾತ್ಮಿಕತೆಯಲ್ಲಿದೆ. ನಮ್ಮ ಸಂಸ್ಕೃತಿ ಜೀವನದಲ್ಲೇ ಹಾಸು ಹೊಕ್ಕಾಗಿದೆ. ಅದು ಶುಷ್ಕ ವೇದಾಂತವಲ್ಲ. ಆದರೆ ಈಗ ಆಧ್ಯಾತ್ಮಿಕತೆ ನಮ್ಮಿಂದ ದೂರವಾಗಿದೆ. ಅದನ್ನು ಪುನರ್ ಸ್ಥಾಪಿಸಲು ನಾಂದಿ ಹಾಡಬೇಕು. ಅದಕ್ಕೆ ಇಂತಹ ಪ್ರವಚನ ಸಹಾಯಕವಾಗುತ್ತದೆ'' ಎಂದು ಪೂಜ್ಯ ಶ್ರೀ ಶ್ರೀಗಳವರು ನುಡಿದರು.

'ಆಧ್ಯಾತ್ಮ ಜಗತ್ತು ಸೃಷ್ಟಿ ಆಗಬೇಕು. ಆಧ್ಯಾತ್ಮಿಕ ಜೀವನ ವ್ಯಾಪಿಸಿಕೊಂಡಾಗ ಹೊಸ ಬೆಳಕು ಹಾಗೂ ಶಾಂತಿ ನೆಲಸಲು ಕಾರಣವಾಗುತ್ತದೆ. ಆರ್ಥಿಕ, ರಾಜಕೀಯ ಮತ್ತು ಸಾಮಾಜಿಕ ಸಂಗತಿಗಳಿಗಿಂತ ಆಧ್ಯಾತ್ಮ ಮಿಗಿಲಾದದ್ದು, ಶಾಂತಿ-ಸೌಹಾರ್ದತೆಯನ್ನು ಆಧ್ಯಾತ್ಮಿಕ ಮಾರ್ಗದ ಮೂಲಕ ಕಂಡುಕೊಳ್ಳಲು ಸಾಧ್ಯ' ಎಂದರು.

'ಹೊಡೆದಾಟ-ಬಡಿದಾಟದಂತಹ ವಾತಾವರಣ ಬದಲಾಗಲು ನಮ್ಮ ದೃಷ್ಟಿ ಬದಲಾಗಬೇಕು. ಭಾರತವನ್ನು ಕಟ್ಟುವ ಜಗತ್ತನ್ನು ಒಂದುಗೂಡಿಸುವ ಸಂಕಲ್ಪ ಮಾಡಬೇಕು. ಈ ದಿಸೆಯಲ್ಲಿ ಚಿಂತನೆ ನಡೆಸಬೇಕು. ಸಣ್ಣಪುಟ್ಟ ವಿಚಾರಗಳಲ್ಲಿಯೇ ಜೀವನ ವ್ಯರ್ಥ ಮಾಡುವುದು ಸರಿಯಲ್ಲ' ಎಂದು ಕಿವಿಮಾತು ಹೇಳಿದರು..

''ನಮ್ಮ ಸಂಸ್ಕೃತಿ ಶುಷ್ಕ ವೇದಾಂತವಲ್ಲ. ಸಮೃದ್ಧ ಜೀವನವನ್ನು ಸ್ವಾಗತಿಸುವ ಸಂಸ್ಕೃತಿ ನಮ್ಮದು'' ಎಂದು ಅಭಿಪ್ರಾಯಪಟ್ಟರು.

''ಇಂದು ಸಮಾಜದಲ್ಲಿ ಮಾನವೀಯತೆ, ಹೃದಯವಂತಿಕೆ, ಅನುಕಂಪಗಳು ಕಣ್ಮರೆಯಾಗುತ್ತಿವೆ'' ಎಂದು ವಿಷಾದ ವ್ಯಕ್ತಪಡಿಸಿದ ಶ್ರೀ ಶ್ರೀಗಳವರು ''ನಮ್ಮ ದೃಷ್ಟಿಕೋನ ಬದಲಿಸಿಕೊಳ್ಳಬೇಕು. ಎಲ್ಲಕ್ಕಿಂತ ಮೊದಲು 'ನಾನು ಮಾನವ' ಎಂಬ ಭಾವನೆ ಬೆಳೆಸಿಕೊಳ್ಳಬೇಕು ಎಂದು ಹೇಳಿದರು.

''ಮನುಷ್ಯನಿಗೆ ಬೇಕಿರುವುದು ಅನ್ನ, ನೀರು ಮತ್ತು ಸತ್ಯವನ್ನು ಅರಸುವ ಬುದ್ಧಿ ಇವುಗಳಿದ್ದರೆ ಜೀವನ ಸಾರ್ಥಕ'' ಎಂದು ಶ್ರೀ ಸಿದ್ಧೇಶ್ವರ ಸ್ವಾಮಿಗಳು ಹೇಳಿದರು. ಜಗತ್ತು ಯಾವುದರ ಮೇಲೆ ನಿಂತಿದೆಯೋ ಅದೇ ಧರ್ಮ, ಭಾರತದೇಶ ಕೆಟ್ಟಿಲ್ಲ; ಸಾಧುಸಂತರು, ಅನುಭಾವಿಗಳು ಇನ್ನು ಇಲ್ಲಿದ್ದಾರೆ. ಆಧ್ಯಾತ್ಮ ಚಿಂತನೆಗೆ ಇನ್ನು ಬೆಲೆ ಇದೆ ಎಂದ ಮೇಲೆ ಸಮಾಜದಲ್ಲಿ ಮೌಲ್ಯಗಳಿಗೆ ಮಹತ್ವವಿದೆ ಎಂದೇ'' ಅರ್ಥ ಎಂದು ತಿಳಿಸಿದರು.

'ಉಪನಿಷ್‌ಗಳಲ್ಲಿ ಏನೂ ಇಲ್ಲ. ಆದರೆ ಏನೂ ಇಲ್ಲ ಎಂಬುದನ್ನೇ ಅನುಭವಿಸಬೇಕು ಎಂದು ಅದು ಹೇಳುತ್ತವೆ' ಎಂದರು. 'ಆಹಾರ, ನೀರು ನಿಸರ್ಗ ಹಾಗೂ ಜನರನ್ನು ಪ್ರೀತಿಸಬೇಕು. ಸತ್ಯವನ್ನು ರೂಢಿಸಿಕೊಳ್ಳಬೇಕು. ಇವುಗಳ ನೆರವಿನಿಂದ ಸುಂದರ ಬದುಕನ್ನು ಕಟ್ಟಿಕೊಳ್ಳಬೇಕು ಎಂಬುದೇ ಉಪನಿಷತ್‌ಗಳ ಸಾರ' ಎಂದು ಉಪನಿಷತ್‌ಗಳಲ್ಲಿ ಇರುವುದನ್ನು ಅನುಭವಿಸಬೇಕು. ಜೀವನ ಕುರಿತ ಸತ್ಯಗಳ ಬಗ್ಗೆ ಎತ್ತರದ ಮಾತುಗಳಿವೆ.

ಕೆಲವರು ಭಾರತ ಕೆಟ್ಟದ್ದು ಎನ್ನುತ್ತಾರೆ. ಕೆಟ್ಟದ್ದು ಎಲ್ಲಿದೆ; ಋಷಿ-ಮುನಿಗಳು, ದಾರ್ಶನಿಕರು, ಸಂತರು, ಶರಣರನ್ನು ಕಂಡ ಅಮೃತಮಯ ನಾಡು. ಇಲ್ಲಿ ಹುಟ್ಟಿದವರೆಲ್ಲ ಅಮೃತಪುತ್ರರು ಎಂದು ಹೇಳಿದರು.

ಆದಿಚುಂಚನಗಿರಿ ಮಠದ ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮೀಜಿ ಅವರು ಮಾತನಾಡಿ 'ಸಿದ್ದೇಶ್ವರ ಸ್ವಾಮೀಜಿ ಅವರಿಂದ ಬಾಳಿಗೆ, ಬದುಕಿಗೆ ಶಾಶ್ವತ ಬಳಕೆಯಾಗುವ ವಿಚಾರಗಳ ಬಗ್ಗೆಯೇ ಪ್ರವಚನ ನೀಡಿದ್ದಾರೆ. ಒಂದೊಂದು ಮಾತು ತೂಕದಿಂದ ಕೂಡಿತ್ತು. ಅದು ಸತ್ಯದ ಕಡೆಗೆ ಒಯ್ಯುವಂತಿತ್ತು' ಎಂದರು.

''ಇವರ ತತ್ವ ಸಾರ್ವಕಾಲಿಕ ಮತ್ತು ಸರ್ವರಿಗೂ ಬೇಕಾದದ್ದು. ಅರಸನಿಂದ ಆಳಿನವರೆಗೆ ಎಲ್ಲರಿಗೂ ಮಾರ್ಗದರ್ಶನ ಮಾಡುವಂತದ್ದು. ಇಲ್ಲಿಯವರೆಗೆ ಕೇವಲ ಉತ್ತರ ಕರ್ನಾಟಕದ ಜನ ಸವಿಯುತ್ತಿದ್ದ ಜ್ಞಾನಾಮೃತವನ್ನು ಈ ಭಾಗದ ಜನರೂ ಅನುಭವಿಸುವಂತಾಗಿದೆ'' ಎಂದು ಹೇಳಿದರು.

ಸುತ್ತೂರು ಜಗದ್ಗುರು ಶ್ರೀ ಶ್ರೀ ಶಿವರಾತ್ರಿದೇಶಿಕೇಂದ್ರ ಸ್ವಾಮೀಜಿಯವರು ಮಾತನಾಡಿ ''ಇಂತಹ ವಿಚಾರಗಳು ಸಕಾರಾತ್ಮಕವಾಗಿ ಯೋಚಿಸುವ ನಿಟ್ಟಿನಲ್ಲಿ ಮನಸ್ಸಿನಲ್ಲಿ ಜಾಗೃತಿ ಮೂಡಿಸುತ್ತದೆ. ಬೆಳವಣಿಗೆ ಪೂರಕವಲ್ಲದ ನೆಗೆಟಿವ್ ವಿಚಾರಗಳನ್ನು ದೂರಮಾಡುತ್ತವೆ. ಇವರ ಮಾತುಗಳನ್ನು ವಿಶ್ಲೇಷಣೆ ವಿಮರ್ಶೆಗಳಿಗೆ ಒಳಪಡಿಸುವುದು ಅಸಾಧ್ಯವಾದ ಕೆಲಸ. ಶ್ರೀ ಸಿದ್ದೇಶ್ವರ ಸ್ವಾಮೀಜಿಗಳ ಪ್ರತಿಯೊಂದು ಮಾತೂ ಅರ್ಥವಂತಿಕೆ ಪಡೆದಿದೆ. ಇದರಿಂದ ಜನತೆ ಆಧ್ಯಾತ್ಮಿಕತೆ ಕಡೆ ಸಹಜವಾಗಿಯೇ ವಾಲುತ್ತದೆ'' ಎಂದು ಹೇಳಿದರು. ಆಧ್ಯಾತ್ಮಿಕ ಪ್ರವಚನ ವೇದಿಕೆ ಸಂಚಾಲಕರು ಹಾಗೂ ನಾಡಿನ ಹಿರಿಯ ಜಾನಪದ ವಿದ್ವಾಂಸರೂ ಆದ ಶ್ರೀ ಗೊ.ರು. ಚನ್ನಬಸಪ್ಪ ಅವರು ಪ್ರಾಸ್ತಾವಿಕ ನುಡಿಗಳನ್ನಾಡಿದರು. ವೇದಿಕೆಯಲ್ಲಿ ಪೂಜ್ಯ ಶ್ರೀ ಶ್ರೀ ಶಿವಪುರಿಸ್ವಾಮಿಗಳು, ಶಾಸಕರಾದ ಶ್ರೀ ಪಿ.ಜಿ.ಆರ್. ಸಿಂಧ್ಯಾ ಮತ್ತು ಶ್ರೀ ವಿ. ಸೋಮಣ್ಣ, ನಿವೃತ್ತ ಪೊಲೀಸ್ ವರಿಷ್ಠಾಧಿಕಾರಿ ಶ್ರೀ ಎಲ್. ರೇವಣ್ಣಸಿದ್ದಯ್ಯ, ಪತ್ರಿಕೋದ್ಯಮಿ ಶ್ರೀ ಟಿ. ವೆಂಕಟೇಶ್ ಅವರು ಉಪಸ್ಥಿತರಿದ್ದರು. ಹೋಟೆಲ್ ಉದ್ಯಮಿ ಶ್ರೀ ಎಸ್. ಷಡಕ್ಷರಿ ಅವರು ಸ್ವಾಗತಿಸಿದರು. ಬೆಂಗಳೂರು ಗ್ರಾಮಾಂತರ ಜಿಲ್ಲಾ ಪಂಚಾಯತ್ ಮುಖ್ಯಕಾರ್ಯನಿರ್ವಹಣಾಧಿಕಾರಿ ಶ್ರೀ ಸಿ. ಸೋಮಶೇಖರ್ ಶರಣು ಸಮರ್ಪಣೆ ಮಾಡಿದರು.

ವರದಿ : ಎಚ್.ಎಸ್. ಸಿದ್ಧಗಂಗಪ್ಪ

ನಚಿಕೇತ ಎಂಟು ವರ್ಷದ ಬಾಲಕ. ಕಾರಣಾಂತರದಿಂದ ಕಾಲಪುರುಷನಾದ ಯಮಧರ್ಮನ ಬಳಿಗೆ ಹೋದ. ಬಾಲಕನ ಧೈರ್ಯ ಕಂಡು ಯಮಧರ್ಮರಾಜ ಸಂತುಷ್ಟನಾದ. ''ನಿನಗೇನು ವರ ಬೇಕು? ಬೇಡು, ಕೊಡುವೆ'' ಎಂದ. ''ಯಮಧರ್ಮ ನನಗೆ ಆತ್ಮವಿದ್ಯೆಯನ್ನು ಕೊಡು'' ಎಂದ ಬಾಲಕ ನಚಿಕೇತ.

''ನೀನಿನ್ನೂ ಚಿಕ್ಕವನು, ಕಠಿಣವಾದ ಆತ್ಮವಿದ್ಯೆ ನಿನಗೇಕೆ? ಬೇರೆ ಏನಾದರೂ ಕೇಳು. ಲೋಕದಲ್ಲಿ ಬಲ್ಲವರು, ಪಂಡಿತರು ತೀರ್ಥಕ್ಷೇತ್ರಗಳಿಗೆ ಹೋಗಿ ವ್ರತಾಚರಣೆಗಳನ್ನು ಮಾಡಿ ದೇವರಲ್ಲಿ ಅನೇಕ ವರಗಳನ್ನು ಬೇಡುತ್ತಾರೆ. ಆ ಎಲ್ಲ ವರಗಳನ್ನು ನಾನು ನಿನಗೆ ಕೊಡುತ್ತೇನೆ ಬೇಡು'' ಎಂದು ಯಮಧರ್ಮ ಹೇಳಿದ.

*ಯೇ ಯೇ ಕಾಮಾ ದುರ್ಲಭಾ ಮರ್ತ್ಯಲೋಕೇ*
*ಸರ್ವಾನ್ ಕಾಮಾಂಶ್ಛಂದತಃ ಪ್ರಾರ್ಥಯಸ್ವ ॥ ೨೫(೧) ಕ.ಉ.*

''ಅಷ್ಟೇ ಅಲ್ಲ, ಈ ಜಗತ್ತಿನಲ್ಲಿ ಅತ್ಯಂತ ದುರ್ಲಭವಾದುದು ಏನೇನು ಇದೆಯೋ ಅದನ್ನೆಲ್ಲಾ ಬೇಡು ಕೊಡುತ್ತೇನೆ. ಅಪಾರ ಸಂಪದ, ಅಧಿಕಾರ, ರಾಜ್ಯಗದ್ದುಗೆ, ಸೌಂದರ್ಯ, ಚಿರಾಯುಷ್ಯ ಏನಾದರೂ ಬೇಡು ಕೊಡುತ್ತೇನೆ'' ಎಂದು ಯಮಧರ್ಮನು ನಚಿಕೇತನಿಗೆ ಅನಾತ್ಮ ವಿಷಯಗಳ ಪ್ರಲೋಭನೆ ಒಡ್ಡಿದ.

*ಶ್ವೋಭಾವಾಮರ್ತ್ಯಸ್ಯ ಯದಂತಕೈತತ್*
*ಸರ್ವೇಂದ್ರಿಯಾಣಾಂ ಜರಯಂತಿ ತೇಜಃ ।*
*ಅಪಿ ಸರ್ವಂ ಜೀವಿತಮಲ್ಪಮೇವ*
*ತವೈವ ವಾಹಾಸ್ತವನೃತ್ಯಗೀತೇ ॥ ೨೬ (೧) ಕ.ಉ.*

''ನೀನು ಕೊಡುವ ಈ ವರಗಳೆಲ್ಲ, ನಶ್ವರವಾಗಿವೆ, ನನಗೆ ಅಮರವಾದ ಆತ್ಮವಿದ್ಯೆ ಒಂದನ್ನೇ ಕೊಡು'' ಎಂದನು ನಚಿಕೇತ.

''ಇದುವರೆಗೆ ನೀನು ಭೂಮಂಡಲದಲ್ಲಿ ಕೊಟ್ಟ ಸಂಪತ್ತನ್ನು ಯಾರೂ ಜೊತೆಗೆ ಒಯ್ದಿಲ್ಲ. ಮೇಲಾಗಿ ಈ ಐಶ್ವರ್ಯ ಎಂದೂ ಶಾಶ್ವತವಲ್ಲ. ಇನ್ನು ನೀನು ಬೇಡಿದಷ್ಟು ಆಯುಷ್ಯ ಕೊಡುತ್ತೇನೆ ಎನ್ನುತ್ತೀಯೆ. ಆದರೆ ಮನುಷ್ಯನಿಗೆ ಎಷ್ಟು ವರ್ಷ ಬದುಕಿದರೂ ಸಾಕೆನ್ನಿವುದಿಲ್ಲ.'' (ಯಯಾತಿ ಮಹಾರಾಜನು ವಿಷಯಭೋಗದಾಸೆಯಿಂದ ಮಗನ ಆಯುಷ್ಯವನ್ನೂ ಸಹ ಬೇಡಲು ನಾಚಲಿಲ್ಲ).

''ಇನ್ನು ನೀನು ಕೊಡುವ ವಿಷಯಭೋಗವೆಲ್ಲಾ ನಮ್ಮನ್ನು ಶಕ್ತಿಹೀನರನ್ನಾಗಿ ಮಾಡುತ್ತವೆ. ನಮ್ಮ ಕಣ್ಣಿನ ತೇಜ, ಬುದ್ಧಿಯ ಓಜ, ಮನದ ಉತ್ಸಾಹ, ಮೈಕಾವನ್ನೆಲ್ಲಾ ಈ ವಿಷಯಗಳು ಹರಣ ಮಾಡುತ್ತವೆ. ಆದ್ದರಿಂದ ನೀನು ಕೊಡಬೇಕೆಂದಿರುವ ಆಯುಷ್ಯ, ಐಶ್ವರ್ಯ, ಇತರ ಭೋಗವಾವುದೂ ನನಗೆ ಬೇಡ. ಅವುಗಳೆಲ್ಲ ನಿನಗೇ ಇರಲಿ. ಅಮೌಲ್ಯವಾದ ಆತ್ಮಜ್ಞಾನ ವೊಂದನ್ನೇ ಕರುಣಿಸು'' ಎಂದು ಜಾಣನಾದ ಬಾಲಕ ನಚಿಕೇತನು ಯಮಧರ್ಮನಿಗೆ ಹೇಳಿದ. ನಚಿಕೇತನ ಆತ್ಮಜ್ಞಾನದ ಪಿಪಾಸೆಯು ಜಗನ್ಮಾನ್ಯ ! ವಿಶ್ವ ಆಧ್ಯಾತ್ಮ ಸಾಧಕರಿಗೆಲ್ಲ ಆದರ್ಶ !

*(ಲೋಕಸಂಗ್ರಹ)*





## ಶ್ರೀ ಮಠದಲ್ಲಿ ಸಂಯುಕ್ತ ವಿದ್ಯಾರ್ಥಿ ಸಂಘದ ವಾರ್ಷಿಕೋತ್ಸವ




ಪರಮಪೂಜ್ಯ ಶ್ರೀ ಶ್ರೀಗಳವರಿಂದ ಆಶೀರ್ವಚನ. ವೇದಿಕೆಯಲ್ಲಿ : ಕಿರಿಯ ಶ್ರೀಗಳಾದ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು, ರಂಗಭೂಮಿ ಹಿರಿಯ ಕಲಾವಿದ ಮಾಸ್ಟರ್ ಹಿರಣಯ್ಯ ಮತ್ತು ಶ್ರೀಮಠದ ಹಳೆಯ ವಿದ್ಯಾರ್ಥಿ ಹಾಗೂ ನಿವೃತ್ತ ಪೊಲೀಸ್ ವರಿಷ್ಠಾಧಿಕಾರಿ ಶ್ರೀ ಎಲ್. ರೇವಣ್ಣಸಿದ್ಧಯ್ಯ ಅವರು

ದಿನಾಂಕ ೨೭.೨.೨೦೦೪ರಂದು ಶ್ರೀಮಠದಲ್ಲಿ ಸಂಯುಕ್ತ ವಿದ್ಯಾರ್ಥಿ ಸಂಘದ ವಾರ್ಷಿಕೋತ್ಸವ ಸಮಾರಂಭ ಪರಮಪೂಜ್ಯ ಶ್ರೀ ಶ್ರೀಗಳವರ ದಿವ್ಯ ಸಾನ್ನಿಧ್ಯದಲ್ಲಿ ನಡೆಯಿತು. ಮುಖ್ಯ ಅತಿಥಿಗಳಾಗಿ ರಂಗಭೂಮಿಯ ಪ್ರಸಿದ್ಧ ಹಿರಿಯ ನಟ ಮಾಸ್ಟರ್ ಹಿರಣಯ್ಯ ಅವರು ಭಾಗವಹಿಸಿದ್ದರು. ಅವರು ಈ ಸಂದರ್ಭದಲ್ಲಿ ಮಾತನಾಡಿ ''ಪರಮಪೂಜ್ಯ ಶ್ರೀ ಶ್ರೀಗಳವರು ದೇವಮಾನವರು, ಅನೇಕರು ಅನೇಕ ರೀತಿಯ ಪವಾಡಗಳನ್ನು ಮಾಡಬಹುದು, ಆದರೆ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು ಇಲ್ಲಿ ನಡೆಸುವ ದಾಸೋಹ ನಿಜವಾದ ಪವಾಡ, ಈ ಇಳಿ ವಯಸ್ಸಿನಲ್ಲಿಯೂ ಅವರು ಸಮಾಜಕ್ಕೆ ಸಲ್ಲಿಸುತ್ತಿರುವ ಸೇವೆ ಅನುಪಮವಾದುದು. ಇಲ್ಲಿ ಭಾರತೀಯ ನಿಜವಾದ ಜೀವಂತ ಸಂಸ್ಕೃತಿಯನ್ನು ಕಾಣಬಹುದು'' ಎಂದು ತಿಳಿಸಿದರು.

ಸಮಾರೋಪ ಭಾಷಣ ಮಾಡಿದ ಮಠದ ನಿವೃತ್ತ ಹಿರಿಯ ಪೊಲೀಸ್ ವರಿಷ್ಠಾಧಿಕಾರಿಳಾದ ಶ್ರೀ ಎಲ್. ರೇವಣ್ಣಸಿದ್ಧಯ್ಯನವರು 'ಶ್ರೀಮಠ ನನಗೆ ಎಲ್ಲಾ ಶಕ್ತಿಯನ್ನು ನೀಡಿದೆ. ನಾನು ಈ ಮಠದಲ್ಲಿ ಉತ್ತಮ ವಿದ್ಯಾರ್ಥಿಯಾಗಿದ್ದೆ, ಶ್ರದ್ಧೆಯಿಂದ ಅಭ್ಯಾಸ ಮಾಡಿದೆ, ಉತ್ತಮ ವೃತ್ತಿಯಲ್ಲಿ ಯಶಸ್ಸು ಗಳಿಸಿದೆ, ಇದೆಲ್ಲ ಪರಮಪೂಜ್ಯರ ಆಶೀರ್ವಾದದ ಫಲ'' ಎಂದು ತಿಳಿಸಿದರು.

ಅಧ್ಯಕ್ಷತೆ ವಹಿಸಿದ್ದ ಶ್ರೀಮಠದ ಕಿರಿಯ ಶ್ರೀಗಳಾದ ಪೂಜ್ಯ ಶ್ರೀ ಸಿದ್ಧಲಿಂಗ ಸ್ವಾಮೀಜಿಯವರು ಬಹುಮಾನ ವಿತರಿಸಿ ಮಾತನಾಡುತ್ತಾ, ''ಶಿಕ್ಷಣವೆಂದರೆ ವಿದ್ಯಾರ್ಥಿಯ ಸರ್ವತೋಮುಖವಾದ ಬೆಳವಣಿಗೆಯೆ ಶಿಕ್ಷಣ ಬರಿ ಪಠ್ಯ ಪುಸ್ತಕಕ್ಕಷ್ಟೇ ಸೀಮಿತವಾಗಬಾರದು. ಪಠ್ಯೇತರ ಚಟುವಟಿಕೆಗಳಲ್ಲಿಯೂ ಭಾಗವಹಿಸಿ ನಿಮ್ಮಲ್ಲಿ ಸುಪ್ತವಾಗಿರುವ ಪ್ರತಿಭೆಯನ್ನು ಹೊರಹೊಮ್ಮಿಸಬೇಕು. ನಿಮಗೆ ಪಾಠ ಹೇಳಿದ ಗುರುಗಳ ಬಗ್ಗೆ, ಶ್ರೀಮಠದ ಬಗ್ಗೆ ಒಳ್ಳೆಯ ಭಾವನೆ ಇರಲಿ, ಕಲಿತ ಒಳ್ಳೆಯ ಆಚಾರ ವಿಚಾರಗಳು ನಿಮ್ಮ ಜೀವನದಲ್ಲಿ ಸದ್ಬಳಕೆಯಾಗಲಿ'' ಎಂದು ಆಶಿಸಿದರು.

ದಿವ್ಯಸಾನ್ನಿಧ್ಯ ವಹಿಸಿದ್ದ ಪರಮಪೂಜ್ಯ ಶ್ರೀ ಶ್ರೀಗಳವರು ಆಶೀರ್ವಚನ ನೀಡುತ್ತಾ, ''ಈ ಸಂಘಗಳ ಮುಖೇನ ಉತ್ತಮವಾದ ಕೆಲಸ ಕಾರ್ಯಗಳನ್ನು ಮಾಡಲು ಸಹಕಾರಿಯಾಗುತ್ತದೆ, ವಿದ್ಯಾರ್ಥಿಗಳು ಇದರ ಪ್ರಯೋಜನ ಪಡೆದುಕೊಳ್ಳಬೇಕು. ಮಠದ ವಿದ್ಯಾರ್ಥಿಗಳು ಹೇಗೆ ಬೆಳೆಯಬೇಕೆಂಬುದಕ್ಕೆ ರೇವಣ್ಣಸಿದ್ದಯ್ಯ ಒಂದು ಜೀವಂತ ಉದಾಹರಣೆ, ನಿಮ್ಮಲ್ಲಿ ಶ್ರದ್ಧೆ ಏಕಾಗ್ರತೆ, ಒಳ್ಳೆಯ ನಡೆತೆ ಇವೆಲ್ಲವನ್ನು ಚಿಕ್ಕಂದಿನಿಂದಲೆ ಬೆಳೆಸಿಕೊಳ್ಳಬೇಕು ಮುಂದೆ ಅವು ಒಳ್ಳೆಯ ಫಲ ನೀಡುತ್ತವೆ. ಜೀವನದಲ್ಲಿ ಹೆಚ್ಚು ಬೆಲೆಬಾಳುವಂತಹುದು ಕಾಲ, ಈ ಕಾಲವನ್ನು ವೃಥಾ ವ್ಯಯಮಾಡಬಾರದು, ಪ್ರತಿಯೊಂದು ಕ್ಷಣವು ನಮ್ಮ ಜೀವನದಲ್ಲಿ ಒಂದು ಕೊಡುಗೆಯನ್ನು ಕೊಡಬೇಕು. ಪಟ್ಟಣದ ಮಕ್ಕಳಿಗೆ ಎಲ್ಲಾ ಸವಲತ್ತುಗಳಿರುತ್ತವೆ, ಗ್ರಾಮೀಣ ಭಾಗದಿಂದ ಬಂದಿರುವ ನೀವು ಕಷ್ಟಪಟ್ಟು ಅಭ್ಯಾಸಮಾಡಬೇಕು. ಇದು ಸ್ಪರ್ಧಾತ್ಮಕವಾದ ಜಗತ್ತು ಯಾರು ಉತ್ತಮ ಶ್ರೇಣಿಯಲ್ಲಿ ತೇರ್ಗಡೆಯಾಗುತ್ತಾರೋ ಅಂತಹವರು ಬದುಕಬಲ್ಲರು, ಇರುವ ಅವಕಾಶವನ್ನು ಉಪಯೋಗಿಸಿಕೊಂಡು ಅಧ್ಯಯನ ದಲ್ಲಿ ತೊಡಗಬೇಕು'' ಎಂದು ಆಶೀರ್ವಚನ ನೀಡಿದರು. ಇದೇ ಸಂದರ್ಭದಲ್ಲಿ ಮಾಸ್ಟರ್ ಹಿರಣಯ್ಯ ಅವರನ್ನು ಪೂಜ್ಯ ಶ್ರೀ ಶ್ರೀಗಳವರು ಶಾಲುಹೊದಿಸಿ ಫಲತಾಂಬೂಲ ನೀಡಿ ಗೌರವಿಸಿದರು.

ವಿದ್ಯಾರ್ಥಿಗಳಿಂದ ಸಾಮೂಹಿಕ ಪ್ರಾರ್ಥನೆಯೊಂದಿಗೆ ಕಾರ್ಯಕ್ರಮ ಪ್ರಾರಂಭವಾಯಿತು. ಶ್ರೀ ಪಿ.ಎನ್. ಚಂದ್ರಶೇಖರಯ್ಯನವರು ಸ್ವಾಗತಿಸಿದರು. ಶ್ರೀ ಜಿ.ಎಚ್. ಗಂಗಾಧರಯ್ಯನವರು ವರದಿ ವಾಚಿಸಿದರು, ಶ್ರೀ ಜಿ. ಗವಿಸಿದ್ದಯ್ಯನವರು ವಂದಿಸಿದರು. ಶ್ರೀ ಡಿ.ಎಸ್. ನಾಗರಾಜ್ ಕಾರ್ಯಕ್ರಮ ನಿರೂಪಿಸಿದರು.

ವರದಿ : ಡಿ.ಎಸ್. ನಾಗರಾಜ್

## ಗ್ರಾಮಾಂತರ ಬಸವ ಜಯಂತಿ




ಮಂಡ್ಯ ತಾಲ್ಲೂಕು ಜಿ. ಹೊಸಹಳ್ಳಿ ಗ್ರಾಮದಲ್ಲಿ ಗ್ರಾಮಾಂತರ ಬಸವ ಜಯಂತಿ ಮತ್ತು ಶಂಭುಲಿಂಗೇಶ್ವರ ಸ್ವಾಮಿ ನೂತನ ದೇವಾಲಯ ಉದ್ಘಾಟನಾ ಸಮಾರಂಭದಲ್ಲಿ ಪರಮಪೂಜ್ಯ ಶ್ರೀ ಶ್ರೀಗಳವರಿಂದ ಆಶೀರ್ವಚನ





## ಮಹಾದಾಸೋಹ ನಿಧಿಗೆ ೨೦೦೧ ರೂ.ಗಳಿಗೂ ಹೆಚ್ಚು ಕಾಣಿಕೆಯನ್ನು ನೀಡಿದವರ ಪಟ್ಟಿ

(ಮುಂದುವರೆದುದು)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೧೨೨೩. | ಶ್ರೀ ಎನ್. ಚಂದ್ರಶೇಖರಯ್ಯ<br>ಮುಖ್ಯ ಶಿಕ್ಷಕರು | ೨,೦೦೧.೦೦ |
| ೧೨೨೪. | ಶ್ರೀಮತಿ ಎಂ. ಕರುಣಾ<br>ಸಹ ಶಿಕ್ಷಕರು | ೨,೦೦೧.೦೦ |
| ೧೨೨೫. | ಶ್ರೀಮತಿ ಕೆ.ಎನ್. ಪ್ರಮೀಳಾ<br>ಸಹ ಶಿಕ್ಷಕರು | ೨,೦೦೧.೦೦ |
| ೧೨೨೬. | ಶ್ರೀಮತಿ ಜಿ. ರಾಜೇಶ್ವರಿ<br>ಸಹ ಶಿಕ್ಷಕರು | ೨,೦೦೧.೦೦ |
| ೧೨೨೭. | ಶ್ರೀ ಬಿ.ಆರ್. ಸದಾಶಿವಯ್ಯ<br>ಸಹ ಶಿಕ್ಷಕರು | ೨,೦೦೧.೦೦ |
| | ಕ್ರ.ಸಂ. ೧೨೨೩ ರಿಂದ ೧೨೨೭ರ ವರೆಗಿನ ವಿಳಾಸ<br>ಶ್ರೀ ಸಿದ್ದಗಂಗಾ ಗ್ರಾಮಾಂತರ ಪ್ರೌಢಶಾಲೆ,<br>ಶಿವನಹಳ್ಳಿ, ಬೆಂಗಳೂರು – ೫೬೦ ೦೧೦. | |
| ೧೨೨೮. | ಶ್ರೀ ಮಿಠಾಯಿ ಅಂಗಡಿ ಮಹಾದೇವಪ್ಪ<br>ನಂ. ೬/೬, ಕಾವೇರಿ ರಸ್ತೆ,<br>ಈಶ್ವರನ ಗುಡಿ ಬೀದಿ,<br>ಕೊಳ್ಳೇಗಾಲ. | ೨,೫೦೦.೦೦ |
| ೧೨೨೯. | ಶ್ರೀ ಕಾಳೇಗೌಡ<br>ಅಸಿಸ್ಟೆಂಟ್ ಮ್ಯಾನೇಜರ್,<br>ಶ್ರೀ ಚಾಮುಂಡೇಶ್ವರಿ ಶುಗರ್ಸ್ ಲಿ.<br>ಆಡಳಿತ ವಿಭಾಗ, ಕೆ.ಎಂ. ದೊಡ್ಡಿ,<br>ಮದ್ದೂರು ತಾಲ್ಲೂಕು – ೫೭೧ ೪೨೨,<br>ಮಂಡ್ಯ ಜಿಲ್ಲೆ. | ೧,೦೦೧.೦೦<br>(೧ನೇ ಕಂತು) |
| ೧೨೩೦. | ಕುಮಾರಿ ಎಂ.ಎಸ್. ಪುಷ್ಪಲತಾ<br>ಬಿನ್ ಶಾಂತಮಲ್ಲಪ್ಪ<br>ಸಹ ಶಿಕ್ಷಕರು,<br>ಸಿದ್ಧಲಿಂಗೇಶ್ವರ ಬಡಾವಣೆ,<br>ಬಸವಾಪಟ್ಟಣ ಅರಕಲಗೂಡು ತಾ.<br>ಹಾಸನ ಜಿಲ್ಲೆ. | ೪,೦೦೧.೦೦ |
| ೧೨೩೧. | ಶ್ರೀ ಟಿ. ಚಂದ್ರಯ್ಯ<br>ಮುಖ್ಯ ಶಿಕ್ಷಕರು | ೧,೦೦೧.೦೦ |
| ೧೨೩೨. | ಶ್ರೀ ಇ.ಎಂ. ಸಂಪತ್‌ಕುಮಾರ್<br>ಸಹ ಶಿಕ್ಷಕರು | ೧,೦೦೧.೦೦ |
| ೧೨೩೩. | ಶ್ರೀ ಜಿ. ಲಿಂಗಣ್ಣ<br>ಸಹ ಶಿಕ್ಷಕರು | ೧,೦೦೧.೦೦ |

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೧೨೩೪. | ಶ್ರೀ ಹೆಚ್. ಅಶ್ವಥಯ್ಯ<br>ಸಹ ಶಿಕ್ಷಕರು | ೧,೦೦೧.೦೦ |
| ೧೨೩೫. | ಶ್ರೀ ಎಂ. ಶಿವಣ್ಣ<br>ಸಹ ಶಿಕ್ಷಕರು | ೧,೦೦೧.೦೦ |
| ೧೨೩೬. | ಶ್ರೀ ಜಿ. ನರಸಿಂಹಮೂರ್ತಿ<br>ಸಹ ಶಿಕ್ಷಕರು | ೧,೦೦೧.೦೦ |
| ೧೨೩೭. | ಶ್ರೀ ಟಿ.ವಿ. ಕೃಷ್ಣಪ್ಪ<br>ದೈಹಿಕ ಶಿಕ್ಷಕರು | ೧,೦೦೧.೦೦ |
| ೧೨೩೮. | ಶ್ರೀ ಶ್ರೀನಿವಾಸಮೂರ್ತಿ<br>ವೃತ್ತಿ ಶಿಕ್ಷಕರು | ೧,೦೦೧.೦೦ |
| ೧೨೩೯. | ಶ್ರೀ ಮಲ್ಲಿಕಾರ್ಜುನ<br>ಪ್ರ.ಶಾ.ಸ. | ೧.೦೦೧.೦೦ |
| ೧೨೪೦. | ಶ್ರೀ ಡಿ. ಲಕ್ಷ್ಮೀನರಸಪ್ಪ<br>ಸೇವಕರು | ೧,೦೦೧.೦೦ |
| | ಕ್ರ.ಸಂ. ೧೨೩೧ ರಿಂದ ೧೨೪೦ರ ವರೆಗಿನ ವಿಳಾಸ<br>ಶ್ರೀ ಬಸವೇಶ್ವರ ಪ್ರೌಢಶಾಲೆ;<br>ದೊಡ್ಡಸಾಗ್ಗೆರೆ, ಕೊರಟಗೆರೆ ತಾಲ್ಲೂಕು. | |
| ೧೨೪೧. | ಶ್ರೀ ಆರ್. ನಾಗಭೂಷಣ<br>ನಂ. ೧೮೮, ಆಚಾರ್ ಬಿಲ್ಡಿಂಗ್ಸ್,<br>ಬಸವನಪುರ ಮುಖ್ಯರಸ್ತೆ,<br>ಕೃಷ್ಣರಾಜಪುರ, ಬೆಂಗಳೂರು-೩೬. | ೨,೦೧೬.೦೦ |
| ೧೨೪೨. | ಶ್ರೀ ಜಾಕಿ ದುಬ್ಬೆ ಅಂಡ್<br>ಹಾಟ್‌ಮೇಲ್ ಕಾಂ | ೧೦,೦೦೦.೦೦ |
| ೧೨೪೩. | ಶ್ರೀಮತಿ ಜಯಶ್ರಿ ನಾಗರಾಜು<br>ನಂ. ೭೫, ೪ನೇ ಹಂತ, ೩ನೇ ಕ್ರಾಸ್,<br>ಬೆಮೆಲ್ ಲೇ ಔಟ್, ರಾಜರಾಜೇಶ್ವರಿನಗರ,<br>ಬೆಂಗಳೂರು – ೫೬೦ ೦೯೮. | ೫,೧೦೦.೦೦ |
| ೧೨೪೪. | ಶ್ರೀ ಎಂ. ನಂಜುಂಡಯ್ಯ<br>ಮುಖ್ಯ ಶಿಕ್ಷಕರು,<br>ಶ್ರೀ ಜಯಮಂಗಲಿ ಗ್ರಾ. ಪ್ರೌಢಶಾಲೆ,<br>ನಿಟ್ಟರಹಳ್ಳಿ, ಮಧುಗಿರಿ ತಾಲ್ಲೂಕು. | ೨,೦೦೧.೦೦ |
| ೧೨೪೫. | ಶ್ರೀ ಎಂ. ನಂಜುಂಡಸ್ವಾಮಿ<br>ಸಹ ಶಿಕ್ಷಕರು,<br>ಶ್ರೀ ಜಯಮಂಗಲಿ ಗ್ರಾ. ಪ್ರೌಢಶಾಲೆ,<br>ನಿಟ್ಟರಹಳ್ಳಿ, ಮಧುಗಿರಿ ತಾಲ್ಲೂಕು. | ೨,೦೦೧.೦೦ |

*(ಮುಂದುವರೆಯುತ್ತದೆ)*

## ಶತಮಾನೋತ್ಸವ ನಿಧಿ

**ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ಶತಮಾನೋತ್ಸವ ಸಮಿತಿಗೆ ಒಂದು ಸಾವಿರ ರೂ.ಗಳಿಗಿಂತ ಹೆಚ್ಚು ಹಣವನ್ನು ನೀಡಿದವರ ಹೆಸರು ಮತ್ತು ವಿಳಾಸಗಳು**

(ಮುಂದುವರೆದುದು)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೮೪೦. | ಶ್ರೀಮತಿ ಡಿ.ಎಂ. ದಾಕ್ಷಾಯಣಮ್ಮ<br>ಉಪನ್ಯಾಸಕರು | ೧,೦೦೧.೦೦ |
| ೮೪೧. | ಶ್ರೀ ಎಂ. ವೆಂಕಟರವಣಪ್ಪ<br>ಉಪನ್ಯಾಸಕರು | ೧,೦೦೧.೦೦ |
| ೮೪೨. | ಶ್ರೀ ಪ್ರಭಾಕರ<br>ಉಪನ್ಯಾಸಕರು | ೧,೦೦೧.೦೦ |
| ೮೪೩. | ಶ್ರೀ ಎಸ್.ಎನ್. ಯಾವಗಲ್<br>ಉಪನ್ಯಾಸಕರು | ೧,೦೦೧.೦೦ |
| ೮೪೪. | ಶ್ರೀ ಚನ್ನೇಗೌಡ<br>ದೈಹಿಕ ಶಿಕ್ಷಕರು | ೧,೦೦೧.೦೦ |
| ೮೪೫. | ಶ್ರೀ ಗೋಪಾಲಕೃಷ್ಣ<br>ದ್ವಿತೀಯ ದರ್ಜೆ ಸಹಾಯಕರು | ೧,೦೦೧.೦೦ |
| ೮೪೬. | ಶ್ರೀ ಹೆಚ್. ರಂಗಣ್ಣ<br>ದ್ವಿತೀಯ ದರ್ಜೆ ಸಹಾಯಕರು | ೧,೦೦೧.೦೦ |
| ೮೪೭. | ಶ್ರೀ ಕೆ.ಪಿ. ಹೊನ್ನಪ್ಪ<br>ಪ್ರ.ಶಾ.ಸ. | ೧,೦೦೧.೦೦ |
| ೮೪೮. | ಶ್ರೀ ಹೆಚ್. ಕೃಷ್ಣಪ್ಪ<br>ಡಿ. ದರ್ಜೆ ನೌಕರರು | ೧,೦೦೧.೦೦ |
| ೮೪೯. | ಶ್ರೀ ವಿ. ನಾಗಭೂಷಣ<br>ಪ್ರ.ಶಾ.ಸ. | ೧,೦೦೧.೦೦ |
| ೮೫೦. | ಶ್ರೀ ಟಿ.ಬಿ. ಕೆಂಚಯ್ಯ<br>ಪ್ರ.ಶಾ.ಸ. | ೧,೦೦೧.೦೦ |
| ೮೫೧. | ಶ್ರೀ ಬಿ.ಎಸ್. ಸಿದ್ದಲಿಂಗಮೂರ್ತಿ<br>ಪ್ರ.ಶಾ.ಸ. | ೧,೦೦೧.೦೦ |
| ೮೫೨. | ಶ್ರೀ ಅಬ್ದುಲ್ ಜಲೀಲ ಸಾಬ್<br>ಡಿ. ಗ್ರೂಪ್ ನೌಕರರು | ೧,೦೦೧.೦೦ |
| ೮೫೩. | ಶ್ರೀಮತಿ ಗಂಗಾಶ್ರೀ<br>ಡಿ. ದರ್ಜೆ ನೌಕರರು<br>ಕ್ರ.ಸಂ. ೮೪೦ ರಿಂದ ೮೫೩ರ ವಿಳಾಸಗಳು<br>ಶ್ರೀ ಸಿದ್ದಗಂಗಾ ಪದವಿಪೂರ್ವ ಕಾಲೇಜು<br>ಬಿ.ಹೆಚ್. ರಸ್ತೆ, ತುಮಕೂರು. | ೧,೦೦೧.೦೦ |
| ೮೫೪. | ಶ್ರೀ ಶಿವಕುಮಾರಸ್ವಾಮಿ<br>ದ್ವಿತೀಯ ದರ್ಜೆ ಸಹಾಯಕರು,<br>ಶ್ರೀ ಬಸವೇಶ್ವರ ಪ್ರೌಢಶಾಲೆ,<br>ಸೋಲೂರು, ಮಾಗಡಿ ತಾಲ್ಲೂಕು. | ೧,೦೦೧.೦೦ |
| ೮೫೫. | ಶ್ರೀ ಕೆ.ಎನ್. ಶಿವರುದ್ರಪ್ಪ<br>ಸಹ ಶಿಕ್ಷಕರು | ೧,೦೦೧.೦೦ |
| ೮೫೬. | ಶ್ರೀ ಆರ್. ಜಯಂತ್<br>ಸಹ ಶಿಕ್ಷಕರು | ೧,೦೦೧.೦೦ |
| ೮೫೭. | ಶ್ರೀ ಮರಿಯಪ್ಪ<br>ವೃತ್ತಿ ಶಿಕ್ಷಕರು<br>ಕ್ರ.ಸಂ. ೮೫೫ ರಿಂದ ೮೫೭ರ ವಿಳಾಸಗಳು<br>ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ,<br>ಅರೆಯೂರು, ತುಮಕೂರು ತಾಲ್ಲೂಕು. | ೧,೦೦೧.೦೦ |
| ೮೫೮. | ಶ್ರೀಮತಿ ಟಿ.ಜಿ. ಪುಷ್ಪಾ<br>ಸಹ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಪ್ರಾಕ್ಟೀಸಿಂಗ್ ಎಲಿಮೆಂಟರಿ ಶಾಲೆ,<br>ಬಿ.ಹೆಚ್. ರಸ್ತೆ, ತುಮಕೂರು. | ೧,೦೦೧.೦೦ |
| ೮೫೯. | ಶ್ರೀ ಆರ್.ಜಿ. ಪರಮೇಶ್ವರಪ್ಪ<br>ಸಹ ಶಿಕ್ಷಕರು,<br>ಶ್ರೀ ಬಸವೇಶ್ವರ ಪ್ರೌಢಶಾಲೆ,<br>ಹುಲಿಕಲ್, ಮಾಗಡಿ ತಾಲ್ಲೂಕು. | ೧,೦೦೧.೦೦ |
| ೮೬೦. | ಶ್ರೀ ನರಸಿಂಹರೆಡ್ಡಿ<br>ಸಹ ಶಿಕ್ಷಕರು<br>ಶ್ರೀ ಬಸವೇಶ್ವರ ಪ್ರೌಢಶಾಲೆ,<br>ಹುಲಿಕಲ್, ಮಾಗಡಿ ತಾಲ್ಲೂಕು. | ೧,೦೦೧.೦೦ |
| ೮೬೧. | ಶ್ರೀ ವೆಂಕಟೇಶಯ್ಯ<br>ಸಹ ಶಿಕ್ಷಕರು | ೧,೦೦೦.೦೦ |
| ೮೬೨. | ಶ್ರೀಮತಿ ಗೌರಮ್ಮ<br>ಸಹ ಶಿಕ್ಷಕರು | ೧,೦೦೧.೦೦ |
| ೮೬೩. | ಶ್ರೀ ಎಂ. ಚೌಡಯ್ಯ<br>ಸಹ ಶಿಕ್ಷಕರು | ೧,೦೦೧.೦೦ |
| ೮೬೪. | ಶ್ರೀಮತಿ ಎನ್.ಯು. ಉಮಾದೇವಿ<br>ಸಹ ಶಿಕ್ಷಕರು | ೧,೦೦೧.೦೦ |
| ೮೬೫. | ಶ್ರೀಮತಿ ಎ. ಭಾಗ್ಯಮ್ಮ<br>ಸಹ ಶಿಕ್ಷಕರು | ೧,೦೦೧.೦೦ |
| ೮೬೬. | ಶ್ರೀ ಜಿ. ವೆಂಕಟಾಚಲಯ್ಯ<br>ಸಹ ಶಿಕ್ಷಕರು<br>ಕ್ರ.ಸಂ. ೮೬೧ ರಿಂದ ೮೬೬ರ ವಿಳಾಸಗಳು<br>ಎಸ್.ಎ.ಕೆ.ಹೆಚ್.ಪಿ.ಎಸ್., ಜೈಮಾರುತಿ ನಗರ,<br>ಬೆಂಗಳೂರು – ೫೬೦ ೦೯೬. | ೧,೦೦೧.೦೦ |

(ಮುಂದುವರೆಯುತ್ತದೆ)

RNI No. 17139/69 "Siddaganga" Monthly - postal Reg.No. KA/SK/TMR/385/2003-05




ತ್ರಿವಿಧ ದಾಸೋಹಿ ಶ್ರೀಮನ್ನಿರಂಜನ ಪ್ರಣವ ಸ್ವರೂಪಿ ಪರಮಪೂಜ್ಯ
ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರಿಂದ ಆಶೀರ್ವಚನ




ಪರಮಪೂಜ್ಯ ಶ್ರೀ ಶ್ರೀಗಳವರ ದಿವ್ಯಸಾನ್ನಿಧ್ಯದಲ್ಲಿ
ಕನ್ನಡ ಮತ್ತು ಸಂಸ್ಕೃತಿ ಸಚಿವೆ ಶ್ರೀಮತಿ ರಾಣಿ ಸತೀಶ್ ಅವರು ಮಾತನಾಡುತ್ತಿರುವುದು